KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೨೨, ೨೦೦೬ (ಆಷಾಢ ೧, ಶಕವರ್ಷ ೧೯೨೮) | ಸಂಚಿಕೆ ೨೫ |
|---|---|---|

## ಭಾಗ - ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಹಕಾರ ಸಚಿವಾಲಯ**

**ವಿಷಯ:** ಎಂಟು ವ್ಯವಸಾಯ ಸೇವಾ ಸಹಕಾರ ಬ್ಯಾಂಕುಗಳಿಗೆ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಬಗ್ಗೆ

**ಓದಲಾಗಿದೆ:** ಮಾನ್ಯ ಅಧ್ಯಕ್ಷರು, ಕರ್ನಾಟಕ ವಿಧಾನ ಸಭೆ, ರವರ ಪತ್ರ ಸಂಖ್ಯೆ: ಎಸ್‌ಪಿಎಲ್‌ಎ/ಡಿಒ/3378/06, ದಿನಾಂಕ: 13.03.2006 ಹಾಗೂ ಸಂಖ್ಯೆ: ಎಸ್‌ಪಿಎಲ್/ನ/3361/2006, ದಿನಾಂಕ: 07.03.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಮಾನ್ಯ ಅಧ್ಯಕ್ಷರು, ಕರ್ನಾಟಕ ವಿಧಾನ ಸಭೆ, ರವರು ಮಂಡ್ಯ ಜಿಲ್ಲೆಯ ಈ ಕೆಳಕಂಡ ಎಂಟು ವ್ಯವಸಾಯ ಸೇವಾ ಸಹಕಾರ ಬ್ಯಾಂಕುಗಳಿಗೆ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.09.2006 ರೊಳಗೆ ನಡೆಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

1. ಬೂಕನಕೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬೂಕನಕೆರೆ
2. ಆನೆಗೋಳ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಆನೆಗೋಳ
3. ಕಿಕ್ಕೇರಿ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕಿಕ್ಕೇರಿ
4. ಶೀಳನೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಶೀಳನೆರೆ
5. ಬಲ್ಲೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಲ್ಲೇನಹಳ್ಳಿ
6. ವಿಠಲಾಪುರ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ವಿಠಲಾಪುರ
7. ಬಳ್ಳೇಕೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಳ್ಳೇಕೆರೆ
8. ಅಗ್ರಹಾರ ಬಾಚಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಅಗ್ರಹಾರ ಬಾಚಹಳ್ಳಿ

ಮೇಲ್ಕಂಡ ಬ್ಯಾಂಕುಗಳ ಸಿಬ್ಬಂದಿ ವರ್ಗದವರು ಸುಸ್ತಿ ಸಾಲಗಳ ವಸೂಲಾತಿ ಮತ್ತು ಎನ್.ಸಿ.ಎಲ್ ವಸೂಲು ಮಾಡಲು ಕಾಲಾವಕಾಶ ಬೇಕಾಗಿರುವುದರಿಂದಲೂ ಹಾಗೂ ರೈತಾಪಿ ಜನರು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದರಿಂದಲೂ ಅವರೆಲ್ಲರೂ ಮಹಾಸಭೆಗಳಲ್ಲಿ ಭಾಗವಹಿಸಲು ಅನಾನುಕೂಲವಾಗುವ ದೃಷ್ಟಿಯಿಂದ ಅಲ್ಲದೇ ಒಂದೇ ವರ್ಷದಲ್ಲಿ ಎರಡುಬಾರಿ ಮಹಾಸಭೆಗಳನ್ನು ನಡೆಸುವುದರಿಂದ ಬ್ಯಾಂಕುಗಳಿಗೆ ತಗಲುವ ಆರ್ಥಿಕ ವೆಚ್ಚವನ್ನು ಮೇಲ್ಕಂಡ ಬ್ಯಾಂಕುಗಳಿಗೆ ತಡೆಗಟ್ಟುವ ದೃಷ್ಟಿಯಿಂದ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು 2005-06ನೇ ಸಾಲಿನ ವಾರ್ಷಿಕ ಮಹಾಸಭೆಯ ಜೊತೆಗೆ ಏಕಕಾಲದಲ್ಲಿ ನಡೆಸಲು ಅನುವಾಗುವಂತೆ ದಿನಾಂಕ: 30.09.2006ರ ವರೆಗೆ ಅವಧಿ ವಿಸ್ತರಿಸುವಂತೆ ಸಂಬಂಧಪಟ್ಟ ಸಹಕಾರ ಸಂಘಗಳ/ಬ್ಯಾಂಕುಗಳ ಅಧ್ಯಕ್ಷರು ಸಹ ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 63 ಸಿಎಲ್ಎಮ್ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣದ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯವಸಾಯ ಸೇವಾ ಸಹಕಾರ ಬ್ಯಾಂಕುಗಳಾದ"

1. ಬೂಕನಕೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬೂಕನಕೆರೆ
2. ಆನೆಗೋಳ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಆನೆಗೋಳ
3. ಕಿಕ್ಕೇರಿ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕಿಕ್ಕೇರಿ
4. ಶೀಳನೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಶೀಳನೆರೆ
5. ಬಲ್ಲೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಲ್ಲೇನಹಳ್ಳಿ
6. ವಿಠಲಾಪುರ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ವಿಠಲಾಪುರ
7. ಬಳ್ಳೇಕೆರೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಳ್ಳೇಕೆರೆ
8. ಅಗ್ರಹಾರ ಬಾಚಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಅಗ್ರಹಾರ ಬಾಚಹಳ್ಳಿ

ಈ ಬ್ಯಾಂಕುಗಳಿಗೆ 2004–05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 30.09.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಬ್ಯಾಂಕುಗಳಿಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ

**27(1)ರ ಪ್ರಕರಣದಲ್ಲಿ**

27ನೇ ಪ್ರಕರಣ ಉಪ ಪ್ರಕರಣ (1)ರ ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹನ್ನೆರಡು ತಿಂಗಳು ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 979 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No: DPAR 86 SAS 2005, Bangalore, Dated: 24th May 2006**

The notification No.14012/08/2005-AIS-III, dated: 26.4.2006 of Government of India, Department of Personnel & Training, New Delhi is hereby republished.

(TO BE PUBLISHED IN THE GAZETTE OF INDIA PART I SECTION 2)

part-1 (SECTION-2)

No.14012/08/2005 AIS-III,

Government of India

Ministry of Personnel, Public Grievances & Pensions

(Department of Personnel & Training)

In exercise of the powers conferred by rule 3A of the India Administrative Service (Probation) Rules, 1954, the President is pleased to confirm, in the Indian Administrative Service, the following member of the Indian Administrative Service borne on the State Cadre of Karnataka, with effect from the date shown against the name:-

| NAME | BATCH | DATE OF CONFIRMATION |
|---|---|---|
| Shri M.S. Srikar | 1999 | 20-09-2001 |

Sd-

**G.C. Pandey**

Under Secretary to the Govt. of India.

To

The Manager,
Government of India Press,
Faridabad, (Haryana).

By Order and in the Name of the Governor of Karnataka,

**K. SUDHAKARA SHETTY**

PR-982 Under Secretary to Government, DP & AR (Services-1).

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 34 ರಾಶಾಪ್ರ 2006, ಬೆಂಗಳೂರು, ದಿನಾಂಕ: 4ನೇ ಮೇ 2006**

ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 ಮತ್ತು ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು**

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

## I

**1962ರ ಅಧಿನಿಯಮ 12.-** ಲೇವಾದೇವಿದಾರರಿಗೆ ಮತ್ತು ಲೇವಾದೇವಿಗೆ ಸಂಬಂಧಿಸಿದಂತೆ ಪ್ರಸ್ತುತ, ರಾಜ್ಯದ ವಿವಿಧ ಪ್ರದೇಶಗಳಲ್ಲಿ ಐದು ಬೇರೆ ಬೇರೆ ಅಧಿನಿಯಮಗಳಿವೆ. ಈ ಅಧಿನಿಯಮಗಳು ವ್ಯಾಪ್ತಿಯಲ್ಲಿ ಸಮಾನವಾಗಿಲ್ಲ. ಇಡೀ ರಾಜ್ಯಕ್ಕೆ ಅನ್ವಯವಾಗುವ ಮತ್ತು ಲೇವಾದೇವಿ ವ್ಯವಹಾರಗಳನ್ನು ಪರಿಣಾಮಕಾರಿಯಾಗಿ ವಿನಿಯಮಗೊಳಿಸಲು ಮತ್ತು ನಿಯಂತ್ರಣಗೊಳಿಸಲು ಮಾತ್ರವೇ ಅಲ್ಲದೆ, ಮುಗ್ದ ಸಾಲಗಾರರಿಗೆ ಸಾಕಷ್ಟು ರಕ್ಷಣೆಯನ್ನು ನೀಡಲೂ ಸಹ ಪರ್ಯಾಪ್ತ ಉಪಬಂಧಗಳನ್ನು ಕಲ್ಪಿಸಲು ಒಂದು ಅಧಿನಿಯಮವನ್ನು ಹೊಂದುವುದು ಅವಶ್ಯವಾಗಿದೆ. ಮೈಸೂರು ಲೇವಾದೇವಿದಾರರ ವಿಧೇಯಕ, 1958 ಇದು ಈ ಉದ್ದೇಶವನ್ನು ಸಾಧಿಸುವ ಒಂದು ವಿಧೇಯಕವಾಗಿದೆ.

ವಿಧೇಯಕದ ಕೆಲವು ಮುಖ್ಯ ಅಂಶಗಳೆಂದರೆ:-

(i) ಲೇವಾದೇವಿದಾರರಿಗೆ ಲೈಸೆನ್ಸ್ ನೀಡುವುದು;

(ii) ನಿಯಮಿಸಲಾದ ಲೆಕ್ಕಗಳನ್ನು ಇಡಲು ಮತ್ತು ಅವುಗಳನ್ನು ಒದಗಿಸಲು ಲೇವಾದೇವಿದಾರರನ್ನು ಅಗತ್ಯಪಡಿಸುವುದು;

(iii) ಡಿಕ್ರಿ ಮೊಬಲಗನ್ನು ಕಂತುಗಳಲ್ಲಿ ಸಂದಾಯ ಮಾಡುವಂತೆ ನಿರ್ದೇಶಿಸಲು ನ್ಯಾಯಾಲಯಗಳಿಗೆ ಅಧಿಕಾರ ನೀಡುವುದು;

(iv) ಒಂದು ಬ್ಯಾಂಕಿಗೆ ಅಥವಾ ಬ್ಯಾಂಕಿನಿಂದ, ಒಂದು ಸಹಕಾರ ಸಂಘದಿಂದ, ವಿಮಾ ಕಂಪನಿಯಿಂದ, ಸರ್ಕಾರದಿಂದ ಅಧಿಕಾರ ನೀಡಲಾದ ಸ್ಥಳೀಯ ಪ್ರಾಧಿಕಾರದಿಂದ ನೀಡಲಾಗುವ ಸಾಲಗಳನ್ನು ಮತ್ತು 2(9)ನೇ ಖಂಡದಲ್ಲಿ ನಿರ್ದಿಷ್ಟಪಡಿಸಲಾದ ಇತರ ಬಗೆಯ ಸಾಲಗಳನ್ನು ಈ ಅಧಿನಿಯಮದ ವ್ಯಾಪ್ತಿಯಿಂದ ಹೊರತುಪಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ ದಿನಾಂಕ 26ನೇ ಮಾರ್ಚ್ 1959 ರಲ್ಲಿ ಪ್ರಕಟವಾಗಿದೆ. )

## II

**1976ರ ತಿದ್ದುಪಡಿ ಮಾಡುವ ಅಧಿನಿಯಮ 77.-** ದುಬಾರಿ ಬಡ್ಡಿಯ ಲೇವಾದೇವಿ ವ್ಯವಹಾರವನ್ನು ಮತ್ತಷ್ಟು ನಿರ್ಬಂಧಿಸುವ ದೃಷ್ಟಿಯಿಂದ ಅಧಿನಿಯಮದ ಉಲ್ಲಂಘನೆಗೆ ಬೇರೆ ಬೇರೆ ದಂಡಗಳನ್ನು ಒದಗಿಸುವುದೇ ಅಲ್ಲದೇ, ಈಗಿನ ಅಧಿನಿಯಮದಲ್ಲಿ ಇರುವ ಕೆಲವು ಕೊರತೆಗಳನ್ನು ನಿವಾರಿಸುವುದು ಮತ್ತು ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸಲು ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಾಕಷ್ಟು ಅಧಿಕಾರಗಳನ್ನು ಒದಗಿಸುವುದೂ ಸಹ ಅತ್ಯಗತ್ಯವಾಗಿ ಪರಿಣಮಿಸಿದೆ.

ತದನುಸಾರವಾಗಿ, ಲೈಸೆನ್ಸ್ ಇಲ್ಲದಿರುವ ಲೇವಾದೇವಿದಾರರಿಗೆ ಲೈಸೆನ್ಸ್ ಪಡೆಯಲು ಮತ್ತು ಆ ನಂತರ ಅವರು ಬಾಕಿ ವಸೂಲಿಗೆ ದಾವೆ ಹೂಡುವುದಕ್ಕೆ ಅನುಮತಿ ನೀಡಲು ನ್ಯಾಯಾಲಯಕ್ಕೆ ಸಾಧ್ಯವಾಗುವಂತೆ ಅಧಿನಿಯಮದ 11ನೇ ಪ್ರಕರಣದ ಅಡಿಯಲ್ಲಿ ಲಭ್ಯವಿರುವ ಪ್ರಸ್ತುತ ಸೌಲಭ್ಯವನ್ನು ತಿದ್ದುಪಡಿ ಉಪಬಂಧಗಳ ಅಡಿಯಲ್ಲಿ ರದ್ದುಗೊಳಿಸಲಾಗಿದೆ.

ಎರಡನೆಯದಾಗಿ, ಅಧಿನಿಯಮದ ಅಡಿಯಲ್ಲಿ ಅಧಿಕಾರ ನೀಡಲಾದ ಅಧಿಕಾರಿಗಳು, ಲೇವಾದೇವಿ ವ್ಯವಹಾರ ನಡೆಯುತ್ತಿರುವ ಸ್ಥಳವನ್ನು ಪ್ರವೇಶಿಸಲು ಮತ್ತು ಲೇವಾ ದೇವಿದಾರರು ಅಗತ್ಯವಿರುವ ದಾಖಲೆಗಳನ್ನು ಹಾಜರುಪಡಿಸುವಂತೆ

ಅವರನ್ನು ಕೋರಲು ಮತ್ತು ಅಗತ್ಯವಿದ್ದರೆ, ಸ್ಥಳವನ್ನು ಶೋಧನೆ ಮಾಡಲು ಮತ್ತು ಅವಶ್ಯವಿರುವಂಥ ಯಾವುದೇ ದಾಖಲೆ ಅಥವಾ ದಸ್ತಾವೇಜನ್ನು ಜಪ್ತಿ ಮಾಡಲು ಅಧಿಕಾರ ನೀಡುವುದಕ್ಕಾಗಿ 15ನೇ ಪ್ರಕರಣವನ್ನು ಪ್ರತಿಯೋಜಿಸಲಾಗಿದೆ.

ಮೂರನೆಯದಾಗಿ, ಲೇವಾದೇವಿಯ ಅನಪೇಕ್ಷಿತ ವ್ಯವಹಾರಗಳನ್ನು ನಿರುತ್ಸಾಹಗೊಳಿಸುವ ಅಧಿನಿಯಮದ ಅಡಿಯಲ್ಲಿ, ದಂಡಗಳನ್ನು ಮತ್ತು ಕಾರಾವಾಸ ಶಿಕ್ಷೆ ವಿಧಿಸುವ ಇವೆರಡೂ ದಂಡನೆಗಳನ್ನು ಹೆಚ್ಚಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿ.ಸ. ವಿಧೇಯಕ ಸಂ. 1976ರ 59ರಿಂದ ಪಡೆಯಲಾಗಿದೆ.)

## III

**1985ರ ತಿದ್ದುಪಡಿ ಮಾಡುವ ಅಧಿನಿಯಮ 41.-** ಲೈಸೆನ್ಸ್ ಹೊಂದಿರುವ ಲೇವಾದೇವಿದಾರರಿಂದ ಹಣವನ್ನು ಸಾಲ ಪಡೆಯುವ ವ್ಯಕ್ತಿಗಳು ಬೆಲೆಬಾಳುವ ಚಿನ್ನದ ಆಭರಣಗಳು ಮತ್ತು ಇತರ ವಸ್ತುಗಳನ್ನು ಅವರಲ್ಲಿ ಒತ್ತೆ ಇಡುತ್ತಾರೆ.

ಈ ಸಾಲಗಾರರ ಹಿತಾಸಕ್ತಿಗಳನ್ನು ಕಾಪಾಡಲು, ಅಂಥ ಲೈಸೆನ್ಸ್ ಹೊಂದಿರುವ ಲೇವಾದೇವಿದಾರರು ಸರ್ಕಾರಿ ಖಜಾನೆಯಲ್ಲಿ ಒಂದು ಭದ್ರತಾ ಠೇವಣಿ ಇಡುವಂತೆ ಒತ್ತಾಯಿಸಲು ಮತ್ತು ಇನ್ನು ಮುಂದೆ ಲೈಸೆನ್ಸ್ ಮಂಜೂರು ಮಾಡಲು ಭದ್ರತಾ ಠೇವಣಿ ಇಡುವುದನ್ನು ಒಂದು ಪೂರ್ವಭಾವಿ ಷರತ್ತನ್ನಾಗಿ ಮಾಡಲು ಉದ್ದೇಶಿಸಲಾಗಿದೆ.

ಅಧಿನಿಯಮದ ನಿರ್ವಹಣೆಯಲ್ಲಿ ಎದುರಾಗುವ ಹೆಚ್ಚು ಪ್ರಮಾಣದ ಕೆಲಸವನ್ನು ದೃಷ್ಟಿಯಲ್ಲಿರಿಸಿಕೊಂಡು, ಲೈಸೆನ್ಸ್ ಶುಲ್ಕವನ್ನು ಹೆಚ್ಚಿಸಬೇಕೆಂದು ಸಹ ಉದ್ದೇಶಿಸಲಾಗಿದೆ.

ವಿಷಯವು ಅತಿ ತುರ್ತು ಸ್ವರೂಪದ್ದಾದುದರಿಂದಾಗಿ, ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ಅಧ್ಯಾದೇಶ, 1985ನ್ನು (1985ರ ಕರ್ನಾಟಕ ಅಧ್ಯಾದೇಶ ಸಂ. 11) ಹೊರಡಿಸಲಾಯಿತು.

ಸದರಿ ಅಧ್ಯಾದೇಶದ ಬದಲಿಯಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ IV-2ಎ , ದಿನಾಂಕ 25ನೇ ಜುಲೈ 1985 ಸಂ. 399 ಪುಟ 6ರಲ್ಲಿ ಪ್ರಕಟವಾಗಿದೆ.)

## IV

**1987ರ ತಿದ್ದುಪಡಿ ಮಾಡುವ ಅಧಿನಿಯಮ 2:-** ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ರ ಅಡಿಯಲ್ಲಿ ಕೆಲವು ಬ್ಯಾಂಕಿಂಗ್ ಮತ್ತು ಹಣಕಾಸು ಸಂಸ್ಥೆಗಳನ್ನು ಲೇವಾದೇವಿದಾರ ಎಂಬ ಪರಿಭಾಷೆಯ ವ್ಯಾಪ್ತಿಯಿಂದ ಹೊರತುಪಡಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಅಧಿನಿಯಮದ ಈಗಿರುವ ಉಪಬಂಧಗಳು, ಲೈಸೆನ್ಸುದಾರನು ಅವನ ಲೆಕ್ಕದ ಪುಸ್ತಕಗಳನ್ನು ಯಾವುದೇ ಅಂಗೀಕೃತ ಭಾಷೆಯಲ್ಲಿ ನಿರ್ವಹಿಸಲು ಉಪಬಂಧ ಕಲ್ಪಿಸುತ್ತವೆ. ಅಂಥ ಲೆಕ್ಕಗಳನ್ನು ಕನ್ನಡ ಅಥವಾ ಇಂಗ್ಲೀಷ್ ಭಾಷೆಯಲ್ಲಿ ನಿರ್ವಹಿಸುವುದು ಕಡ್ಡಾಯ ಮಾಡಲು ಉದ್ದೇಶಿಸಲಾಗಿದೆ.

ಮೇಲಿನ ಉದ್ದೇಶಕ್ಕಾಗಿ, ಒಂದು ಅಧ್ಯಾದೇಶವನ್ನು ಪ್ರಖ್ಯಾಪಿಸಲಾಯಿತು. ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ ದಿನಾಂಕ 4ನೇ ಫೆಬ್ರವರಿ 1987ರಂದು ಪುಟ-4ರ ಸಂ.97 ರಲ್ಲಿ ಪ್ರಕಟವಾಗಿದೆ.)

## V

**1998ರ ತಿದ್ದುಪಡಿ ಮಾಡುವ ಅಧಿನಿಯಮ 14:-** ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ನ್ನು (1962ರ ಕರ್ನಾಟಕ ಅಧಿನಿಯಮ 12) ಈ ಮುಂದಿನ ಕಾರಣಗಳಿಗಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:-

**(i)** ಲೈಸೆನ್ಸಿನ ಅವಧಿಯನ್ನು ಒಂದು ವರ್ಷದಿಂದ ಐದು ವರ್ಷಗಳಿಗೆ ಹೆಚ್ಚಿಸುವುದು;

**(ii)** ಲೈಸೆನ್ಸ ಫೀಜನ್ನು ವರ್ಷಕ್ಕೆ 100.00 ರೂ. ಯಿಂದ ಲೈಸೆನ್ಸ್ ಅವಧಿಗೆ 5000.00ರೂ.ಗೆ ಹೆಚ್ಚಿಸುವುದು;

**(iii)** ಲೈಸೆನ್ಸ್ ಫೀಜನ್ನು ಹೆಚ್ಚುವರಿ ವಹಿವಾಟಿನ ಸ್ಥಳಕ್ಕೆ ವರ್ಷಕ್ಕೆ 50.00 ರೂ. ನಿಂದ ಲೈಸೆನ್ಸಿನ ಅವಧಿಯವರೆಗೆ 2500.00 ರೂ.ಗೆ ಹೆಚ್ಚಿಸುವುದು;

**(iv)** ಲೈಸೆನ್ಸನ್ನು ರದ್ದುಪಡಿಸಿದ ಸಂದರ್ಭದಲ್ಲಿ, ಭದ್ರತಾ ಠೇವಣಿಯ ಮರು ಪಾವತಿಗಾಗಿ ಅವಕಾಶ ಕಲ್ಪಿಸುವುದು;

**(v)** ಕರ್ನಾಟಕ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂ.8912/85 ಮತ್ತು ಇತರ ಸಂಬಂಧಪಟ್ಟ ವಿಷಯಗಳಲ್ಲಿ, ಬಡ್ಡಿಯ ಸಂದಾಯವನ್ನು ನಿಷೇಧಿಸುವ ಯಾವ ನಿರ್ದಿಷ್ಟ ಉಪಬಂಧವೂ ಇಲ್ಲದಿರುವ ಕಾರಣ ಭದ್ರತಾ ಠೇವಣಿಯ ಮೇಲೆ ಬಡ್ಡಿಯನ್ನು ಸಂದಾಯ ಮಾಡಲು ನಿರ್ದೇಶಿಸಿರುವುದರಿಂದಾಗಿ, ಈ ಲೋಪವನ್ನು 31ನೇ ಮೇ 1985ರಿಂದ ಪೂರ್ವಾನ್ವಯವಾಗಿ ನಿವಾರಿಸಲು ಮತ್ತು ಕ್ರಮವನ್ನು ಮಾನ್ಯ ಮಾಡಲು ಸೂಕ್ತ ಉಪಬಂಧಗಳನ್ನು ಕಲ್ಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಸಂ.ವ್ಯ.ಶಾ.ಇ 19 ಶಾಸನ 94ರ ಕಡತದಿಂದ ಪಡೆಯಲಾಗಿದೆ.)

# 1962 ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 12

*(1962 ರ ಮಾರ್ಚ್ ಇಪ್ಪತ್ತೊಂಬತ್ತನೇ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟಿಸಲಾಗಿದೆ.)*

# [1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961

*(1962ರ ಮಾರ್ಚ್ ಎಂಟನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮೋದನೆ ಪಡೆಯಲಾಗಿದೆ)*

(ಕರ್ನಾಟಕ ಅಧಿನಿಯಮಗಳು 1976ರ 77, 1985ರ 41, 1987ರ 2 ಮತ್ತು 1998ರ 14ರ ಮೂಲಕ ತಿದ್ದುಪಡಿಯಾದಂತೆ)

**[1][ಕರ್ನಾಟಕ ರಾಜ್ಯ][1] ದಲ್ಲಿ ಲೇವಾದೇವಿ ವ್ಯವಹಾರಗಳನ್ನು ವಿನಿಯಮಿಸಲು ಒಂದು ಅಧಿನಿಯಮ.**

[1][ಕರ್ನಾಟಕ ರಾಜ್ಯ][1] ದಲ್ಲಿ ಲೇವಾದೇವಿ ವ್ಯವಹಾರಗಳನ್ನು ವಿನಿಯಮಿಸಲು ಮತ್ತು ನಿಯಂತ್ರಿಸಲು ಉತ್ತಮ ಉಪಬಂಧವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು [1][ ಕರ್ನಾಟಕ ][1] ಲೇವಾದೇವಿದಾರರ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ ಕರ್ನಾಟಕ ರಾಜ್ಯ][1] ಕ್ಕೆ ಅನ್ವಯಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಿದ ಅಂಥ [1][ದಿನಾಂಕ ][1] ದಂದು ಜಾರಿಗೆ ಬರತಕ್ಕದ್ದು.

1.ಅಧಿನಿಯಮವು ಅಧಿಸೂಚನೆಯ ಮೂಲಕ 1.4.1965ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

[1][(1) " ಬ್ಯಾಂಕ್ " ಎಂದರೆ,-

(i) ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949 (1949ರ ಕೇಂದ್ರ ಅಧಿನಿಯಮ 10) ಅನ್ವಯಿಸುವ ಒಂದು ಬ್ಯಾಂಕಿಂಗ್ ಕಂಪನಿ;

(ii) ಭಾರತೀಯ ಸ್ಟೇಟ್ ಬ್ಯಾಂಕ್ ಅಧಿನಿಯಮ, 1955 ರ (1955ರ ಕೇಂದ್ರ ಅಧಿನಿಯಮ 23) ಅಡಿಯಲ್ಲಿ ರಚಿತವಾದ ಭಾರತೀಯ ಸ್ಟೇಟ್ ಬ್ಯಾಂಕ್;

(iii) ಭಾರತೀಯ ಸ್ಟೇಟ್ ಬ್ಯಾಂಕ್(ಅಧೀನ ಬ್ಯಾಂಕ್‌ಗಳು) ಅಧಿನಿಯಮ, 1959ರ (1959ರ ಕೇಂದ್ರ ಅಧಿನಿಯಮ 38) 2ನೇ ಪ್ರಕರಣದ (ಕೆ) ಖಂಡದಲ್ಲಿ ಪರಿಭಾಷಿಸಲಾದ ಒಂದು ಅಧೀನ ಬ್ಯಾಂಕ್;

(iv) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಸ್ವಾಧೀನ ಮತ್ತು ವರ್ಗಾವಣೆ) ಅಧಿನಿಯಮ, 1970ರ (1970ರ ಕೇಂದ್ರ ಅಧಿನಿಯಮ 5) 3ನೇ ಪ್ರಕರಣದ ಮೇರೆಗೆ ರಚಿತವಾದ ಒಂದು ಸಂವಾದಿ ಹೊಸ ಬ್ಯಾಂಕ್;

(v) ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧಿನಿಯಮ, 1976ರ (1976ರ ಕೇಂದ್ರ ಅಧಿನಿಯಮ 21) ಅಡಿಯಲ್ಲಿ ಸ್ಥಾಪಿಸಲಾದ ಒಂದು ಪ್ರಾದೇಶಿಕ ಗ್ರಾಮೀಣ ಬ್ಯಾಂಕ್;

(vi) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಸ್ವಾಧೀನ ಮತ್ತು ವರ್ಗಾವಣೆ) ಅಧಿನಿಯಮ, 1980ರ (1980ರ ಕೇಂದ್ರ ಅಧಿನಿಯಮ 40) 3ನೇ ಪ್ರಕರಣದ ಅಡಿಯಲ್ಲಿ, ರಚಿತವಾದ ಒಂದು ಸಂವಾದಿ ಹೊಸ ಬ್ಯಾಂಕ್;

(vii) ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ ಅಧಿನಿಯಮ, 1964ರ (1964ರ ಕೇಂದ್ರ ಅಧಿನಿಯಮ 18) ಅಡಿಯಲ್ಲಿ ಸ್ಥಾಪಿತವಾದ ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್;

1. 1985ರ ಅಧಿನಿಯಮ ಸಂಖ್ಯೆ 41ರ ಮೂಲಕ 31.5.1985ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(viii) ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಅಧಿನಿಯಮ, 1981ರ (1981ರ ಕೇಂದ್ರ ಅಧಿನಿಯಮ 61) ಅಡಿಯಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್;

(ix) ಭಾರತೀಯ ರಫ್ತು ಆಮದು ಬ್ಯಾಂಕ್ ಅಧಿನಿಯಮ, 1981ರ (1959ರ ಕೇಂದ್ರ ಅಧಿನಿಯಮ 11) ಅಡಿಯಲ್ಲಿ ಸ್ಥಾಪಿಸಲಾದ ಭಾರತೀಯ ರಫ್ತು ಆಮದು ಬ್ಯಾಂಕ್;

(x) ಭಾರತೀಯ ಕೈಗಾರಿಕಾ ಹಣಕಾಸು ನಿಗಮ ಅಧಿನಿಯಮ, 1948ರ(1948ರ ಕೇಂದ್ರ ಅಧಿನಿಯಮ 15) ಅಡಿಯಲ್ಲಿ ಸ್ಥಾಪಿಸಲಾದ ಭಾರತೀಯ ಕೈಗಾರಿಕಾ ಹಣಕಾಸು ನಿಗಮ;

(xi) ರಾಜ್ಯ ಹಣಕಾಸು ನಿಗಮ ಅಧಿನಿಯಮ, 1951ರ (1951ರ ಕೇಂದ್ರ ಅಧಿನಿಯಮ 63) ಅಡಿಯಲ್ಲಿ ಸ್ಥಾಪಿಸಲಾದ ರಾಜ್ಯ ಹಣಕಾಸು ನಿಗಮ;

[1][(xii) ಭಾರತೀಯ ಕೈಗಾರಿಕಾ ಪುನರ್ ನಿರ್ಮಾಣ ಅಧಿನಿಯಮ, 1984ರ(1984ರ ಕೇಂದ್ರ ಅಧಿನಿಯಮ 62) ಅಡಿಯಲ್ಲಿ ಸ್ಥಾಪಿಸಲಾದ ಭಾರತೀಯ ಕೈಗಾರಿಕಾ ಪುನರ್ ನಿರ್ಮಾಣ ಬ್ಯಾಂಕ್;][1]

1. 1987ರ ಅಧಿನಿಯಮ ಸಂಖ್ಯೆ 2 ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(xiii) ಭಾರತೀಯ ಕಂಪನಿಗಳ ಅಧಿನಿಯಮ, 1913ರ (1913ರ ಕೇಂದ್ರ ಅಧಿನಿಯಮ 7) ಅಡಿಯಲ್ಲಿ ಸಂಘಟಿಸಲಾದ ಭಾರತೀಯ ಕೈಗಾರಿಕಾ ಸಾಲ ಮತ್ತು ಬಂಡವಾಳ ಹೂಡಿಕೆ ನಿಗಮ ನಿಯಮಿತ;][1]

[1][(xiv) ಕಂಪನಿಗಳ ಅಧಿನಿಯಮ, 1956ರ ಅಡಿಯಲ್ಲಿ ಒಂದು ಕಂಪನಿಯಾದ ಕೃಷಿ ಹಣಕಾಸು ನಿಗಮ ನಿಯಮಿತ;][1]

1. 1987ರ ಅಧಿನಿಯಮ ಸಂಖ್ಯೆ 2 ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) "ಲೇವಾದೇವಿ ವ್ಯವಹಾರ" ಎಂದರೆ, ಯಾವುದೇ ಇತರ ವ್ಯವಹಾರಕ್ಕೆ ಸಂಬಂಧಪಡಲಿ ಅಥವಾ ಇಲ್ಲದಿರಲಿ ಅಥವಾ ಅದಕ್ಕೆ ಹೆಚ್ಚಿಗೆಯಾಗಿ ಆಗಲಿ ಸಾಲಗಳನ್ನು ನೀಡುವ ವ್ಯವಹಾರ;

(3) "ಬಂಡವಾಳ" ಎಂದರೆ, ಒಬ್ಬ ಲೇವಾದೇವಿದಾರನು, ಲೇವಾದೇವಿ ವ್ಯವಹಾರದಲ್ಲಿ ಹೂಡುವ ಹಣದ ಒಂದು ಮೊತ್ತ;

(4) "ಕಂಪನಿ" ಎಂದರೆ, ಕಂಪನಿಗಳ ಅಧಿನಿಯಮ,1956ರಲ್ಲಿ (1956ರ ಕೇಂದ್ರ ಅಧಿನಿಯಮ 1) ಪರಿಭಾಷಿಸಲಾದ ಒಂದು ಕಂಪನಿ;

(5) "ಸಹಕಾರ ಸಂಘ" ಎಂದರೆ, [1][ಕರ್ನಾಟಕ ][1] ಸಹಕಾರ ಸಂಘಗಳ ಅಧಿನಿಯಮ, 1959ರ (1959ರ [1][ಕರ್ನಾಟಕ][1] ಅಧಿನಿಯಮ 11) ಅಡಿಯಲ್ಲಿ ನೋಂದಾಯಿಸಲಾದ ಅಥವಾ ನೋಂದಾಯಿಸಲಾಗಿದೆ ಎಂದು ಭಾವಿಸಲಾದ ಒಂದು ಸಂಘ;

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(6) " ಬಡ್ಡಿ " ಎಂಬುದರಲ್ಲಿ, ಅದನ್ನು ವಿಧಿಸಲಾಗಿರಲಿ ಅಥವಾ ನಿರ್ದಿಷ್ಟವಾಗಿ ವಸೂಲು ಮಾಡಲು ಕೋರಿರಲಿ, ವಾಸ್ತವವಾಗಿ ನೀಡಲಾಗಿದ್ದ ಸಾಲದ ಮೇಲೆ ಬಡ್ಡಿಯ ರೂಪದಲ್ಲಿ ಅಥವಾ ಇತರ ರೀತಿಯಲ್ಲಿ ಹೆಚ್ಚಿಗೆಯಾಗಿ ಬಂದ ಉತ್ಪತ್ತಿಯು ಸೇರಿರುತ್ತದೆ. ಆದರೆ, ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಉಪಬಂಧಗಳಿಗೆ ಅನುಸಾರವಾಗಿ ಇರುವ ಬೆಲೆಗಳು, ಚಾರ್ಜುಗಳು ಅಥವಾ ವೆಚ್ಚಗಳು - ಇವುಗಳಿಗಾಗಿ ಅಥವಾ ಇವುಗಳ ಸಂಬಂಧವಾಗಿ ಒಬ್ಬ ಲೇವಾದೇವಿದಾರನು ಕಾನೂನು ಬದ್ಧವಾಗಿ ವಿಧಿಸಿದ ಯಾವುದೇ ಮೊಬಲಗು ಸೇರಿರುವುದಿಲ್ಲ;

(7) " ಲೈಸೆನ್ಸ್ " ಎಂದರೆ, ಈ ಅಧಿನಿಯಮದ ಅಡಿಯಲ್ಲಿ ನೀಡಲಾದ ಒಂದು ಲೈಸೆನ್ಸ್ ;

(8) " ಲೈಸೆನ್ಸ್ ಫೀಜು " ಎಂದರೆ, ಒಂದು ಲೈಸೆನ್ಸಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಶುಲ್ಕ;

(9) "ಸಾಲ" ಎಂದರೆ, ಹಣದ ರೂಪದಲ್ಲಿ ಅಥವಾ ವಸ್ತು ರೂಪದಲ್ಲಿ ಬಡ್ಡಿಗೆ ನೀಡಲಾದ ಸಾಲ; ಮತ್ತು ವಸ್ತುಶಃ ಹಾಗೆ ಒಂದು ಸಾಲವಾಗುವುದೆಂದು ನ್ಯಾಯಾಲಯಕ್ಕೆ ಕಂಡು ಬರುವ ಯಾವುದೇ ವಹಿವಾಟು ಸೇರುತ್ತದೆ; ಆದರೆ,-

(ಎ) ಒಂದು ಸರ್ಕಾರಿ ಅಂಚೆ ಕಚೇರಿ ಬ್ಯಾಂಕಿನಲ್ಲಿನ ಅಥವಾ [1][ಕರ್ನಾಟಕ ಸರ್ಕಾರಿ ಉಳಿತಾಯ ಬ್ಯಾಂಕ್][1] ನಲ್ಲಿನ ಅಥವಾ ಇತರ ಯಾವುದೇ ಬ್ಯಾಂಕಿನಲ್ಲಿನ ಅಥವಾ ಒಂದು ಕಂಪನಿಯಲ್ಲಿನ ಅಥವಾ ಒಂದು ಸಹಕಾರಿ ಸಂಘದಲ್ಲಿ ಠೇವಣಿಯಾಗಿಟ್ಟ ಹಣ ಅಥವಾ ಇತರ ಸ್ವತ್ತು;

(ಬಿ) [1][ ಕರ್ನಾಟಕ ][1] ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ [1][ ಕರ್ನಾಟಕ ][1] ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಯಾವುದೇ ಸಂಘ ಅಥವಾ ಸಂಸ್ಥೆಗೆ ನೀಡಲಾದ ಅಥವಾ ಪಡೆದ ಸಾಲ ಅಥವಾ ಅದರಲ್ಲಿರುವ ಠೇವಣಿ;

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಸಿ) ಸರ್ಕಾರದಿಂದ ಅಥವಾ ಸರ್ಕಾರವು ಅಧಿಕಾರ ನೀಡಿದ ಯಾವುದೇ ಸ್ಥಳೀಯ ಪ್ರಾಧಿಕಾರದಿಂದ ನೀಡಲಾದ ಸಾಲ;

(ಡಿ) ಒಂದು ಸಹಕಾರ ಸಂಘದಿಂದ ನೀಡಲಾದ ಒಂದು ಸಾಲ;

(ಇ) ಭವಿಷ್ಯ ನಿಧಿಯ ಒಬ್ಬ ಚಂದಾದಾರನಿಗೆ ಅಥವಾ ಒಬ್ಬ ಠೇವಣಿದಾರನಿಗೆ, ನಿಧಿಯಲ್ಲಿನ ತನ್ನ ಖಾತೆಯಲ್ಲಿ ಇರುವ ಹಣದಿಂದ, ನಿಧಿಯ ನಿಯಮಗಳಿಗೆ ಅನುಸಾರವಾಗಿ ನೀಡಲಾದ ಒಂದು ಸಾಲ;

(ಎಫ್) ವಿಮಾ ಅಧಿನಿಯಮ, 1938ರಲ್ಲಿ (1938ರ ಕೇಂದ್ರ ಅಧಿನಿಯಮ ಸಂಖ್ಯೆ IV ) ಪರಿಭಾಷಿಸಲಾದ ಒಂದು ವಿಮಾ ಕಂಪನಿಗೆ ಅಥವಾ ಕಂಪನಿಯಿಂದ ನೀಡಲಾದ ಒಂದು ಸಾಲ;

(ಜಿ) ಬ್ಯಾಂಕಿಗೆ ಅಥವಾ ಬ್ಯಾಂಕಿನಿಂದ ನೀಡಲಾದ ಒಂದು ಸಾಲ;

(ಎಚ್) ವರ್ಗಾವಣೀಯ ಲಿಖಿತಗಳ ಅಧಿನಿಯಮ, 1881ರಲ್ಲಿ (1881ರ ಕೇಂದ್ರ ಅಧಿನಿಯಮ XXVI) ಪರಿಭಾಷಿಸಲಾದಂತೆ, ಒಂದು ಪ್ರಾಮಿಸರಿ ನೋಟಿನ ಆಧಾರದ ಮೇಲೆ ಅಲ್ಲದೆ ಒಂದು ವರ್ಗಾವಣೀಯ ಲಿಖಿತದ ಆಧಾರದ ಮೇಲಣ ಮೂರು ಸಾವಿರ ರೂಪಾಯಿಗಳಿಗಿಂತ ಕಡಿಮೆಯಿಲ್ಲದ ಒಂದು ಸಾಲ;

(ಐ) 26 ಮತ್ತು 28ನೇ ಪ್ರಕರಣಗಳ ಉದ್ದೇಶಗಳನ್ನು ಹೊರತುಪಡಿಸಿ,-

(i) ಒಬ್ಬ ವ್ಯಾಪಾರಿಗೆ ನೀಡಲಾದ ಒಂದು ಸಾಲ;

(ii) ಒಂದು ಕಾನೂನು ಬದ್ಧ ಲೈಸೆನ್ಸ್ ಹೊಂದಿರುವ ಒಬ್ಬ ಲೇವಾದೇವಿದಾರನಿಗೆ ನೀಡಲಾದ ಒಂದು ಸಾಲ; ಅಥವಾ

(iii) ಒಬ್ಬ ಗೇಣಿದಾರನು ಹೊಂದಿರುವ ಪ್ರತಿ ಎಕರೆ ಜಮೀನಿಗೆ ಐವತ್ತು ರೂಪಾಯಿಗಳಿಗೆ ಹೆಚ್ಚಿಲ್ಲದಂತೆ ಬೆಳೆ ಸಾಲವಾಗಿ ಅಥವಾ ಋತುಮಾನದ ಆರ್ಥಿಕ ಸಹಾಯವಾಗಿ ತನ್ನ ಗೇಣಿದಾರನಿಗೆ ಒಬ್ಬ ಜಮೀನುದಾರನು ನೀಡುವ ಒಂದು ಸಾಲ

- ಒಳಗೊಳ್ಳತಕ್ಕದ್ದಲ್ಲ;

(10) " ಲೇವಾದೇವಿದಾರ " , ಎಂದರೆ,-

(ಎ) ರಾಜ್ಯದಲ್ಲಿ ಲೇವಾದೇವಿ ವ್ಯವಹಾರ ನಡೆಸುವ; ಅಥವಾ

(ಬಿ) ರಾಜ್ಯದಲ್ಲಿ ತನ್ನ ಅಥವಾ ಅದರ ಅಂಥ ವ್ಯವಹಾರದ ಪ್ರಧಾನ ಸ್ಥಳವನ್ನು ಹೊಂದಿರುವ,-

(i) ಒಬ್ಬ ವ್ಯಕ್ತಿ; ಅಥವಾ

(ii) ಒಂದು ಅವಿಭಕ್ತ ಹಿಂದೂ ಕುಟುಂಬ; ಅಥವಾ

(iii) ಒಂದು ಕಂಪನಿ; ಅಥವಾ

(iv) ವ್ಯಕ್ತಿಗಳ ನಿಗಮಿತವಲ್ಲದ ಒಂದು ನಿಕಾಯ; ಆದರೆ ಒಂದು ಬ್ಯಾಂಕನ್ನು [1][ಅಥವಾ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಯಾವುದೇ ಇತರ ಹಣಕಾಸು ಸಂಸ್ಥೆಯನ್ನು][1] ಒಳಗೊಳ್ಳುವುದಿಲ್ಲ;

1. 1987ರ ಅಧಿನಿಯಮ ಸಂಖ್ಯೆ 2 ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(11) " ಅಧಿಸೂಚನೆ " ಎಂದರೆ, ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ಒಂದು ಅಧಿಸೂಚನೆ;

(12) " ನಿಯಮಿಸಲಾದುದು " ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(13) ಸಾಲಕ್ಕೆ ಸಂಬಂಧಿಸಿದಂತೆ " ಅಸಲು ಹಣ " ಎಂದರೆ, ಸಾಲಗಾರನಿಗೆ ವಾಸ್ತವವಾಗಿ ನೀಡಲಾದ ಸಾಲ;

(14) " ಭವಿಷ್ಯ ನಿಧಿ " ಎಂದರೆ, ಭವಿಷ್ಯ ನಿಧಿಗಳ ಅಧಿನಿಯಮ, 1925ರಲ್ಲಿ (1925ರ ಕೇಂದ್ರ ಅಧಿನಿಯಮ XIX) ಪರಿಭಾಷಿಸಲಾದಂಥ ಒಂದು ಭವಿಷ್ಯ ನಿಧಿ; ಮತ್ತು ಇದರಲ್ಲಿ ಸದರಿ ಅಧಿನಿಯಮದಲ್ಲಿ ಪರಿಭಾಷಿಸಲಾದಂಥ ಒಂದು ಸರ್ಕಾರಿ ಭವಿಷ್ಯ ನಿಧಿ ಮತ್ತು ಒಂದು ರೈಲ್ವೆ ಭವಿಷ್ಯ ನಿಧಿಯೂ ಒಳಗೊಳ್ಳುತ್ತದೆ;

(15) " ಅಂಗೀಕೃತ ಭಾಷೆ " ಎಂದರೆ, ನ್ಯಾಯಾಲಯದ ಭಾಷೆ;

(16) " ರಿಜಿಸ್ಟರು " ಎಂದರೆ, 4ನೇ ಪ್ರಕರಣದ ಅಡಿಯಲ್ಲಿ ಇಟ್ಟುಕೊಂಡು ಬರುವ ಲೇವಾದೇವಿದಾರನ ಒಂದು ರಿಜಿಸ್ಟರು;

(17) " ನಿಯಮಗಳು " ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳು;

(18) " ರಾಜ್ಯ " ಎಂದರೆ, [1][ ಕರ್ನಾಟಕ ರಾಜ್ಯ ][1];

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(19) " ಈ ಅಧಿನಿಯಮವು ಅನ್ವಯವಾಗುವ ದಾವೆ " ಎಂದರೆ,-

(ಎ) ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದ ತರುವಾಯ ಸಾಲದ ವಸೂಲಿಗಾಗಿ ಹೂಡಲಾದ;

(ಬಿ) ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದ ತರುವಾಯ, ಸದರಿ ದಿನಾಂಕಕ್ಕೆ ಮೊದಲಾಗಲಿ ಅಥವಾ ನಂತರವಾಗಲಿ ಯಾವುದೇ ಸಾಲದ ಸಂಬಂಧದಲ್ಲಿ ತೆಗೆದುಕೊಂಡ ಯಾವುದೇ ಭದ್ರತೆಯ ಅಥವಾ ಮಾಡಲಾದ ಯಾವುದೇ ಒಪ್ಪಂದದ ಜಾರಿಗಾಗಿ ಹೂಡಲಾದ; ಅಥವಾ

(ಸಿ) ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದ ತರುವಾಯ, ಯಾವುದೇ ಸಾಲದ ಸಂಬಂಧದಲ್ಲಿ ನೀಡಲಾದ ಯಾವುದೇ ಭದ್ರತೆಯ ವಿಮೋಚನೆಗಾಗಿ ಸದರಿ ದಿನಾಂಕಕ್ಕೆ ಮೊದಲು ಅಥವಾ ಅನಂತರ ಹೂಡಲಾದ

- ಯಾವುದೇ ದಾವೆ ಅಥವಾ ಕಾರ್ಯವಾಹಿ;

(20) " ವ್ಯಾಪಾರಿ " ಎಂದರೆ, ಸಾಮಾನ್ಯ ವ್ಯವಹಾರ ಕ್ರಮದಲ್ಲಿ ಸರಕುಗಳನ್ನು ಅಥವಾ ಚರ ಅಥವಾ ಸ್ಥಿರ ಸ್ವತ್ತುಗಳನ್ನು ಖರೀದಿ ಮತ್ತು ಮಾರಾಟ ಮಾಡುವ ಒಬ್ಬ ವ್ಯಕ್ತಿ; ಮತ್ತು

ಒಬ್ಬ ಸಗಟು ಅಥವಾ ಚಿಲ್ಲರೆ ವರ್ತಕ,

ಒಬ್ಬ ಕಮೀಷನ್ ಏಜೆಂಟ್,

ಒಬ್ಬ ದಲ್ಲಾಳಿ,

ಒಬ್ಬ ತಯಾರಕ,

ಒಬ್ಬ ಕಂಟ್ರಾಕ್ಟರ್,

ಒಂದು ಕಾರ್ಖಾನೆ ಮಾಲೀಕ

- ಇವರನ್ನು ಒಳಗೊಳ್ಳುತ್ತದೆ. ಆದರೆ, ಒಬ್ಬ ಕುಶಲಕರ್ಮಿಯನ್ನು ಅಥವಾ ತನ್ನ ಕೃಷಿ ಉತ್ಪನ್ನಗಳನ್ನು ಅಥವಾ ಜಾನುವಾರುಗಳನ್ನು ಮಾರಾಟ ಮಾಡುವ ಅಥವಾ ತನ್ನ ಉಪಯೋಗಕ್ಕಾಗಿ ಕೃಷಿ ಉತ್ಪನ್ನಗಳನ್ನು ಅಥವಾ ಜಾನುವಾರುಗಳನ್ನು ಖರೀದಿಸುವ ಒಬ್ಬ ವ್ಯಕ್ತಿಯನ್ನು ಒಳಗೊಳ್ಳುವುದಿಲ್ಲ;

**ವಿವರಣೆ:-** ಈ ಖಂಡದ ಉದ್ದೇಶಗಳಿಗಾಗಿ " ಕುಶಲಕರ್ಮಿ " ಎಂದರೆ, ಹಿಂದಿನ ಹನ್ನೆರಡು ತಿಂಗಳುಗಳ ಅವಧಿಯಲ್ಲಿ ಯಾವುದೇ ಒಂದು ದಿನದಂದು ಒಂದು ತಯಾರಿಕೆಯ ಪ್ರಕ್ರಿಯೆಯಲ್ಲಿ ಹತ್ತಕ್ಕಿಂತ ಹೆಚ್ಚು ಕೆಲಸಗಾರರನ್ನು ನಿಯೋಜಿಸಿಕೊಳ್ಳದ ಒಬ್ಬ ವ್ಯಕ್ತಿ;

[1][(21) " ವರ್ಷ " ಎಂದರೆ, ಏಪ್ರಿಲ್ ಒಂದನೇ ದಿನಾಂಕದಂದು ಪ್ರಾರಂಭವಾಗುವ ವರ್ಷ.][1]

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**3. ರಿಜಿಸ್ಟ್ರಾರ್ ಜನರಲ್, ರಿಜಿಸ್ಟ್ರಾರರು ಮತ್ತು ಸಹಾಯಕ ರಿಜಿಸ್ಟ್ರಾರರ ನೇಮಕಾತಿ.-** ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಅಧಿಸೂಚನೆಯ ಮೂಲಕ, ಲೇವಾದೇವಿದಾರರ ರಿಜಿಸ್ಟ್ರಾರ್ ಜನರಲ್, ರಿಜಿಸ್ಟ್ರಾರರು ಮತ್ತು ಸಹಾಯಕ ರಿಜಿಸ್ಟ್ರಾರರನ್ನು ನೇಮಕ ಮಾಡಬಹುದು ಮತ್ತು ಅಂಥ ಪ್ರತಿಯೊಬ್ಬ ಅಧಿಕಾರಿಯು ತನ್ನ ಅಧಿಕಾರಗಳನ್ನು ಚಲಾಯಿಸತಕ್ಕ ಮತ್ತು ತನ್ನ ಕರ್ತವ್ಯಗಳನ್ನು ನಿರ್ವಹಿಸತಕ್ಕ ಪ್ರದೇಶಗಳನ್ನು ನಿರ್ಧರಿಸಬಹುದು.

**4. ಲೇವಾದೇವಿದಾರರ ರಿಜಿಸ್ಟರು.-** ಪ್ರತಿಯೊಬ್ಬ ಸಹಾಯಕ ರಿಜಿಸ್ಟ್ರಾರನು ತನ್ನ ಅಧಿಕಾರ ವ್ಯಾಪ್ತಿಯೊಳಗಿರುವ ಪ್ರದೇಶಕ್ಕಾಗಿ, ನಿಯಮಿಸಬಹುದಾದಂಥ ನಮೂನೆಯಲ್ಲಿ ಒಂದು ಲೇವಾದೇವಿದಾರರ ರಿಜಿಸ್ಟರನ್ನು ಇಟ್ಟುಕೊಂಡು ಬರತಕ್ಕದ್ದು.

**5. ಲೇವಾದೇವಿದಾರರು ಲೈಸೆನ್ಸ್‌ನ್ನು ಪಡೆಯುವುದು.-** ಯಾರೇ ವ್ಯಕ್ತಿಯು, ಲೈಸೆನ್ಸಿನ ನಿಬಂಧನೆ ಮತ್ತು ಷರತ್ತುಗಳ [1][ಅಡಿಯಲ್ಲಿ ಮತ್ತು][1] ಅವುಗಳಿಗೆ ಅನುಸಾರವಾಗಿಯಲ್ಲದೆ [2][ಮತ್ತು 7ಎ ಪ್ರಕರಣದಲ್ಲಿ ಉಪ ಬಂಧಿಸಲಾದಂತೆ ಭದ್ರತಾ ಠೇವಣಿಯನ್ನು ಸಂದಾಯ ಮಾಡಿದ ಮೇಲಲ್ಲದೆ , ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ಅಧಿನಿಯಮ, 1985ರ ಪ್ರಾರಂಭದ ತರುವಾಯ][2] ರಾಜ್ಯದಲ್ಲಿ ಲೇವಾದೇವಿ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1985ರ ಅಧಿನಿಯಮ ಸಂಖ್ಯೆ 41ರ ಮೂಲಕ 31.5.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**6. ಲೈಸೆನ್ಸಿಗಾಗಿ ಅರ್ಜಿ.-** (1) ಪ್ರತಿಯೊಬ್ಬ ಲೇವಾದೇವಿದಾರನು, ತಾನು ಲೇವಾದೇವಿ ವ್ಯವಹಾರವನ್ನು ನಡೆಸಲು ಉದ್ದೇಶಿಸುವ ಸ್ಥಳದ ಪರಿಮಿತಿಗಳೊಳಗಿನ ಪ್ರದೇಶದ ಅಥವಾ ಆ ಪ್ರದೇಶದಲ್ಲಿ ಒಂದಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಅಂಥ ವ್ಯವಹಾರವನ್ನು ನಡೆಸಲು ಉದ್ದೇಶಿಸಿದರೆ, ಅಂಥ ವ್ಯವಹಾರದ ಪ್ರಧಾನ ಸ್ಥಳವು ಇರುವ ಪ್ರದೇಶದ ಸಹಾಯಕ ರಿಜಿಸ್ಟ್ರಾರನಿಗೆ ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮುಂಚೆ [1][XXX][1] ಒಂದು ಲೈಸೆನ್ಸಿನ ಮಂಜೂರಾತಿಗಾಗಿ ನಿಯಮಿಸಲಾದ ನಮೂನೆಯಲ್ಲಿ ಒಂದು ಅರ್ಜಿಯನ್ನು ಸಲ್ಲಿಸತಕ್ಕದ್ದು. ಅಂಥ ಅರ್ಜಿಯು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ :-

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಎ) ಅಂಥ ಲೇವಾದೇವಿದಾರನು ವ್ಯವಹಾರವನ್ನು ನಡೆಸಲು ಉದ್ದೇಶಿಸಿರುವ ಹೆಸರು ಮತ್ತು ವ್ಯವಹಾರ ನಿರ್ವಹಣೆಗೆ ಜವಾಬ್ದಾರನಾಗಿರಲು ಉದ್ದೇಶಿತ ವ್ಯಕ್ತಿಯ ಹೆಸರು;

(ಬಿ) ಅರ್ಜಿಯು,-

(i) ಒಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಯ ಪರವಾಗಿ ಆಗಿದ್ದರೆ , ಅಂಥ ವ್ಯಕ್ತಿಯ ಹೆಸರು ಮತ್ತು ವಿಳಾಸ;

(ii) ಅವಿಭಕ್ತ ಹಿಂದೂ ಕುಟುಂಬದಿಂದ ಅಥವಾ ಅದರ ಪರವಾಗಿ ಆಗಿದ್ದರೆ, ಅಂಥ ಕುಟುಂಬದ ವ್ಯವಸ್ಥಾಪಕ ಅಥವಾ ಕರಣವಾನ ಅಥವಾ ಯಜಮಾನ ಮತ್ತು ವಯಸ್ಕ ದಾಯಾದಿಗಳ ಹೆಸರುಗಳು ಮತ್ತು ವಿಳಾಸಗಳು;

(iii) ಒಂದು ಕಂಪನಿಯ ಪರವಾಗಿದ್ದರೆ, ನಿರ್ದೇಶಕರ ಮತ್ತು ಅದರ ಮ್ಯಾನೇಜರ್‌ನ ಅಥವಾ ಅದರ ಕಾರ್ಯ ನಿರ್ವಹಣೆ ನಡೆಸುವ ಪ್ರಧಾನ ಅಧಿಕಾರಿಯ ಹೆಸರುಗಳು ಮತ್ತು ವಿಳಾಸಗಳು;

(iv) ವ್ಯಕ್ತಿಗಳ ನಿಗಮಿತವಲ್ಲದ ನಿಕಾಯದಿಂದ ಅಥವಾ ಅದರ ಪರವಾಗಿ ಆಗಿದ್ದರೆ, ಅಂಥ ವ್ಯಕ್ತಿಗಳ ಹೆಸರುಗಳು ಮತ್ತು ವಿಳಾಸಗಳು;

(ಸಿ) ರಾಜ್ಯದಲ್ಲಿ ಲೇವಾದೇವಿ ವ್ಯವಹಾರದ ಪ್ರದೇಶ ಮತ್ತು ಸ್ಥಳ ಅಥವಾ ಪ್ರಧಾನ ಸ್ಥಳ;

(ಡಿ) ಲೇವಾದೇವಿ ವ್ಯವಹಾರವನ್ನು ನಡೆಸಲಾಗುವ ಅಥವಾ ನಡೆಸಲು ಉದ್ದೇಶಿಸಲಾದ ರಾಜ್ಯದಲ್ಲಿರುವ ಇತರ ಯಾವುದೇ ಸ್ಥಳದ ಹೆಸರು;

(ಇ) ಅರ್ಜಿಗೆ ಸಹಿ ಮಾಡಿರುವ ವ್ಯಕ್ತಿಯು ಸ್ವತಃ ತಾನೇ ಆಗಲಿ ಅಥವಾ ಸಂದರ್ಭಾನುಸಾರ ಅಂಥ ಅರ್ಜಿಯನ್ನು ಯಾರ ಪರವಾಗಿ ಮಾಡಲಾಗಿದೆಯೋ ಅಂಥ ಅವಿಭಕ್ತ ಹಿಂದೂ ಕುಟುಂಬದ ಯಾರೇ ವಯಸ್ಕ ದಾಯಾದಿ ಅಥವಾ ಕಂಪನಿಯ ಯಾರೇ ನಿರ್ದೇಶಕ, ಮ್ಯಾನೇಜರ್ ಅಥವಾ ಪ್ರಧಾನ ಅಧಿಕಾರಿಯು ಅಥವಾ ನಿಗಮಿತವಲ್ಲದ ನಿಕಾಯದ ಯಾರೇ ಸದಸ್ಯನು ಅರ್ಜಿಯ ದಿನಾಂಕಕ್ಕೆ ನಿಕಟ ಪೂರ್ವದ [1][ಮಾರ್ಚ್ ತಿಂಗಳ 31ನೇ ದಿನಾಂಕದಂದು][1] ಕೊನೆಗೊಳ್ಳುವ ವರ್ಷದಲ್ಲಿ

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ವೈಯಕ್ತಿಕವಾಗಿಯಾಗಲಿ ಅಥವಾ ಪಾಲುದಾರಿಕೆಯಲ್ಲಾಗಲಿ ಅಥವಾ ಇತರ ಯಾರೇ ದಾಯಾದಿಯೊಂದಿಗೆ ಅಥವಾ ಇತರ ಯಾರೇ ವ್ಯಕ್ತಿಯೊಂದಿಗೆ ಸಂಯುಕ್ತವಾಗಿಯಾಗಲಿ ಮತ್ತು ಅದೇ ಅಥವಾ ಇತರ ಯಾವುದೇ ಹೆಸರಿನಲ್ಲಾಗಲಿ ರಾಜ್ಯದಲ್ಲಿ ಲೇವಾದೇವಿ ವ್ಯವಹಾರವನ್ನು ನಡೆಸಿರುವ ಬಗ್ಗೆ;

(ಎಫ್) ಅರ್ಜಿಯನ್ನು ಸಲ್ಲಿಸಲಾಗಿರುವ ವರ್ಷದಲ್ಲಿ ಅಂಥ ವ್ಯಕ್ತಿಯು ಲೇವಾದೇವಿ ವ್ಯವಹಾರದಲ್ಲಿ ತೊಡಗಿಸಲು ಉದ್ದೇಶಿಸಿರುವ ಬಂಡವಾಳದ ಒಟ್ಟು ಮೊಬಲಗು;

(ಜಿ) ಲೇವಾದೇವಿ ವ್ಯವಹಾರವನ್ನು ನಡೆಸಲಾಗುವ ಸ್ಥಳಗಳು ಒಂದಕ್ಕಿಂತ ಹೆಚ್ಚು ಆಗಿದ್ದರೆ, ಅಂಥ ಪ್ರತಿಯೊಂದು ಸ್ಥಳದಲ್ಲಿ ವ್ಯವಹಾರ ನಿರ್ವಹಿಸತಕ್ಕ ವ್ಯಕ್ತಿಗಳ ಹೆಸರುಗಳು.

(2) ಅರ್ಜಿಯು ಲಿಖಿತದಲ್ಲಿರತಕ್ಕದ್ದು; ಮತ್ತು,-

(ಎ) (i) ಅರ್ಜಿಯನ್ನು ಒಬ್ಬ ವ್ಯಕ್ತಿಯು ಸಲ್ಲಿಸಿದ್ದರೆ, ಅಂಥ ವ್ಯಕ್ತಿಯು;

(ii) ಅರ್ಜಿಯನ್ನು ಒಂದು ಅವಿಭಕ್ತ ಹಿಂದೂ ಕುಟುಂಬದ ಪರವಾಗಿ ಮಾಡಿದ್ದರೆ, ಸಂದರ್ಭಾನುಸಾರ, ಅಂಥ ಕುಟುಂಬದ ವ್ಯವಸ್ಥಾಪಕ ಅಥವಾ ಕರಣವಾನ ಅಥವಾ ಯಜಮಾನನು;

(iii) ಅರ್ಜಿಯನ್ನು ಒಂದು ಕಂಪನಿ ಅಥವಾ ನಿಗಮಿತವಲ್ಲದ ನಿಕಾಯವು ಸಲ್ಲಿಸಿದ್ದರೆ, ಕಾರ್ಯ ನಿರ್ವಹಣಾ ನಿರ್ದೇಶಕ ಅಥವಾ ಭಾರತದ ರಾಜ್ಯಕ್ಷೇತ್ರದಲ್ಲಿ ಅದರ ಪ್ರಧಾನ ವ್ಯವಹಾರ ಸ್ಥಳದ ಅಥವಾ ಅದು ವ್ಯವಹಾರ ನಡೆಸಲು ಉದ್ದೇಶಿಸಲಾದ ಪ್ರದೇಶದಲ್ಲಿ ಅದರ ವ್ಯವಹಾರ ಸ್ಥಳದ ನಿಯಂತ್ರಣವನ್ನು ಹೊಂದಿರುವ ಇತರ ಯಾರೇ ವ್ಯಕ್ತಿಯು

- ಸಹಿಮಾಡಿರತಕ್ಕದ್ದು;

(ಬಿ) ಒಬ್ಬ ಲೇವಾದೇವಿದಾರನಿಂದ ಸ್ವತಃ ಆಗಲಿ ಅಥವಾ ಸಂದರ್ಭಾನುಸಾರ ಕುಟುಂಬದ ಮೂಲಕ ಅಥವಾ ಕಂಪನಿಯ ಮೂಲಕ ಅಥವಾ ನಿಗಮಿತವಲ್ಲದ ನಿಕಾಯದ ಮೂಲಕ ಅಧಿಕಾರ ಪತ್ರ (ಪವರ್ ಆಫ್ ಅಟಾರ್ನಿ) ನೀಡುವ ಮೂಲಕ ಈ ಸಂಬಂಧದಲ್ಲಿ ಪ್ರಾಧಿಕಾರ ಪಡೆದ ಒಬ್ಬ ಏಜೆಂಟನು ಸಹಿ ಮಾಡಿರತಕ್ಕದ್ದು.

(3) ಅರ್ಜಿಯು, ನಿಯಮಿಸಬಹುದಾದಂಥ ಇತರ ವಿವರಗಳನ್ನೂ ಸಹ ಒಳಗೊಂಡಿರತಕ್ಕದ್ದು.

(4) ಅರ್ಜಿಯ ಜೊತೆಗೆ ಈ ಮುಂದಿನ ದರಗಳಲ್ಲಿ ಒಂದು ಲೈಸೆನ್ಸು ಫೀಜು ಇರತಕ್ಕದ್ದು:-

| | |
|---|---|
| (ಎ) ಲೇವಾದೇವಿ ವ್ಯವಹಾರವನ್ನು ನಡೆಸುವ ಸ್ಥಳ ಒಂದಕ್ಕಿಂತ ಹೆಚ್ಚಾಗಿರದಿದ್ದರೆ. | [1][ಐದು ಸಾವಿರ ರೂಪಾಯಿಗಳು][1] |
| (ಬಿ) ಲೇವಾದೇವಿ ವ್ಯವಹಾರವನ್ನು ರಿಜಿಸ್ಟ್ರಾರನ ಪ್ರದೇಶದ ಪರಿಮಿತಿಗಳೊಳಗೆ ಒಂದಕ್ಕಿಂತ ಹೆಚ್ಚು ಸ್ಥಳದಲ್ಲಿ ನಡೆಸ ಬೇಕಾದರೆ. | ವ್ಯವಹಾರದ ಪ್ರಧಾನ ಸ್ಥಳಕ್ಕಾಗಿ [1][ಐದುಸಾವಿರ ರೂಪಾಯಿಗಳು][1] ಮತ್ತು ಆ ಪ್ರದೇಶದಲ್ಲಿಯ ಇತರ ಸ್ಥಳಗಳ ಪೈಕಿ ಪ್ರತಿಯೊಂದಕ್ಕೆ [1][ಎರಡು ಸಾವಿರದ ಐದು ನೂರು ರೂಪಾಯಿಗಳು:][1] |

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಅಂಥ ಅರ್ಜಿಯ ಸಂಬಂಧದಲ್ಲಿ ನಿಯಮಗಳ ಮೂಲಕ ನಿಯಮಿಸಲಾದ ಅವಧಿಯ ಮುಕ್ತಾಯದ ತರುವಾಯ ಅರ್ಜಿಯನ್ನು ಸಲ್ಲಿಸಿದಲ್ಲಿ, ಅದು ಮೇಲೆ ನಿರ್ದಿಷ್ಟಪಡಿಸಲಾದ ದರದ ಎರಡರಷ್ಟು ದರದಲ್ಲಿ ಲೈಸೆನ್ಸ್ ಫೀಜನ್ನು ಒಳಗೊಂಡಿರತಕ್ಕದ್ದು.

(5) ಈ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಫೀಜನ್ನು ನಿಯಮಿಸಲಾದ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಲೈಸೆನ್ಸ್ ಮಂಜೂರಾತಿಯನ್ನು ತಿರಸ್ಕರಿಸಲಾಗಿದ್ದರೂ ಅಥವಾ ಅರ್ಜಿಯನ್ನು ಹಿಂತೆಗೆದುಕೊಂಡಿದ್ದರೂ ಫೀಜನ್ನು ಮರು ಸಂದಾಯ ಮಾಡತಕ್ಕದ್ದಲ್ಲ.

**7. ಲೈಸೆನ್ಸಿನ ಮಂಜೂರಾತಿ ಮತ್ತು ರಿಜಿಸ್ಟರಿನಲ್ಲಿ ನಮೂದನೆ.-** (1) 6ನೇ ಪ್ರಕರಣದ ಅಡಿಯಲ್ಲಿ ಒಂದು ಅರ್ಜಿಯನ್ನು ಸ್ವೀಕರಿಸಿದ ಮೇಲೆ ಮತ್ತು ನಿಯಮಿಸಲಾದ ಕಾರ್ಯ ವಿಧಾನಕ್ಕನುಸಾರವಾಗಿ ಒಂದು ಸಂಕ್ಷಿಪ್ತ ವಿಚಾರಣೆಯನ್ನು ನಡೆಸಿದ ತರುವಾಯ, ಸಹಾಯಕ ರಿಜಿಸ್ಟ್ರಾರನು ತನ್ನ ವರದಿಯೊಂದಿಗೆ ಅರ್ಜಿಯನ್ನು ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು. ರಿಜಿಸ್ಟ್ರಾರನು, ತಾನು ಸೂಕ್ತವೆಂದು ಭಾವಿಸುವಂಥ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ, ಅದನ್ನು ನಡೆಸಿದ ತರುವಾಯ ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಮತ್ತು [1][7 ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಷರತ್ತುಗಳಿಗೆ ಮತ್ತು ಅಂಥ ಇತರ ಷರತ್ತುಗಳಿಗೆ ಒಳಪಟ್ಟು][1] ಅರ್ಜಿದಾರನಿಗೆ ಒಂದು ಲೈಸೆನ್ಸನ್ನು ಮಂಜೂರು ಮಾಡಬಹುದು ಮತ್ತು 4ನೇ ಪ್ರಕರಣದ ಅಡಿಯಲ್ಲಿ ಸಹಾಯಕ ರಿಜಿಸ್ಟ್ರಾರನು ಇಟ್ಟಿರುವ ರಿಜಿಸ್ಟರಿನಲ್ಲಿ ಅಂಥ ಅರ್ಜಿದಾರನ ಹೆಸರನ್ನು ನಮೂದಿಸುವಂತೆ ಅವರಿಗೆ ನಿರ್ದೇಶಿಸಬಹುದು.

1. 1985ರ ಅಧಿನಿಯಮ ಸಂಖ್ಯೆ 41ರ ಮೂಲಕ 31.5.1985 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಅರ್ಜಿಯು, ರಿಜಿಸ್ಟ್ರಾರನ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಒಂದಕ್ಕಿಂತ ಹೆಚ್ಚು ವ್ಯಾಪಾರ ಸ್ಥಳಕ್ಕೆ ಸಂಬಂಧಿಸಿದ್ದರೆ, ಅಂಥ ಪ್ರತಿಯೊಂದು ಸ್ಥಳದ ಸಂಬಂಧದಲ್ಲಿ ಅರ್ಜಿದಾರನ ಮತ್ತು ಅಂಥ ಸ್ಥಳದಲ್ಲಿಯ ವ್ಯವಹಾರದ ನಿರ್ವಹಣೆಗಾಗಿ ಜವಾಬ್ದಾರನಾದ ವ್ಯಕ್ತಿಯ ಹೆಸರಿನಲ್ಲಿ ಪ್ರತ್ಯೇಕ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದು.

(2) ರಾಜ್ಯದೊಳಗಿನ ಯಾವುದೇ ಸ್ಥಳದಲ್ಲಿ, ಆದರೆ ಲೇವಾದೇವಿದಾರನ ಪ್ರಧಾನ ವ್ಯವಹಾರ ಸ್ಥಳದ ಸಂಬಂಧದಲ್ಲಿ ಲೈಸೆನ್ಸನ್ನು ಮಂಜೂರು ಮಾಡಿದ ರಿಜಿಸ್ಟ್ರಾರನ ಅಧಿಕಾರ ವ್ಯಾಪ್ತಿಯ ಹೊರಗಿರುವ ಒಂದು ಸ್ಥಳದಲ್ಲಿ ಲೇವಾದೇವಿ ವ್ಯವಹಾರ ನಡೆಸಲು ಒಂದು ಲೈಸೆನ್ಸನ ಮಂಜೂರಾತಿಗಾಗಿನ ಒಂದು ಕೋರಿಕೆಯನ್ನು ಸಹ ಅರ್ಜಿಯು ಒಳಗೊಂಡಿದ್ದರೆ, ರಿಜಿಸ್ಟ್ರಾರನು ಅರ್ಜಿಯ ಮತ್ತು ಮಂಜೂರಾದ ಲೈಸೆನ್ಸಿನ ಪ್ರತಿಗಳನ್ನು ಅಧಿಕಾರ ವ್ಯಾಪ್ತಿ ಹೊಂದಿರುವ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು. ಅವನು, ಅರ್ಜಿಯ ಸಂಬಂಧದಲ್ಲಿ ಯಾವುದೇ ವಿಚಾರಣೆಯನ್ನು ಮಾಡದೇ 6ನೇ ಪ್ರಕರಣದಲ್ಲಿ ಹೇಳಲಾದ ಲೈಸೆನ್ಸು ಫೀಜನ್ನು ಸಂದಾಯ ಮಾಡಿದ ಮೇಲೆ ಲೈಸೆನ್ಸನ್ನು ಮಂಜೂರು ಮಾಡಬಹುದು.

[1]**[7ಎ. ಲೈಸೆನ್ಸಿನ ಷರತ್ತುಗಳು.-** [2][(1) 7ನೇ ಪ್ರಕರಣದ ಅಡಿಯಲ್ಲಿ ಮೊದಲ ಬಾರಿಗೆ ಒಂದು ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ತರುವಾಯದ ಅವಧಿಗಾಗಿ ಆ ಪ್ರಕರಣದ ಅಡಿಯಲ್ಲಿ ಹೊಸ ಲೈಸೆನ್ಸಿನ ಮಂಜೂರಾತಿಗಾಗಿ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಲೇವಾದೇವಿದಾರನು, ಅಂಥ ಅರ್ಜಿಯನ್ನು ಸಲ್ಲಿಸುವಾಗ, (2)ನೇ ಉಪ ಪ್ರಕರಣದಲ್ಲಿ ಉಪಬಂಧಿಸಲಾದ ಭದ್ರತಾ ಠೇವಣಿಯನ್ನು ಸಂದಾಯ ಮಾಡತಕ್ಕದ್ದು.][2]

1. 1985ರ ಅಧಿನಿಯಮ ಸಂಖ್ಯೆ 41ರ ಮೂಲಕ 31.5.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಕೆಳಗಿನ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಪ್ರತಿಯೊಬ್ಬ ಲೈಸೆನ್ಸದಾರನು, ಲೈಸೆನ್ಸ್ ಷರತ್ತುಗಳ ಯುಕ್ತ ಪಾಲನೆಗೆ ಭದ್ರತೆಯಾಗಿ ಸದರಿ ಕೋಷ್ಟಕದ (3)ನೇ ಅಂಕಣದ ಸಂವಾದಿ ನಮೂದಿನಲ್ಲಿ ನಿರ್ದಿಷ್ಟಪಡಿಸಲಾದ ಮೊಬಲಗನ್ನು ನಿಯಮಿಸಲಾದ ರೀತಿಯಲ್ಲಿ ಸರ್ಕಾರದ ಖಜಾನೆಯಲ್ಲಿ ಠೇವಣಿಯಾಗಿ ಇಡತಕ್ಕದ್ದು.

**ಕೋಷ್ಟಕ**

| 1 | 2 | 3 |
|---|---|---|
| (1) | ಒಂದು ವರ್ಷದಲ್ಲಿ ಒಂದು ಲಕ್ಷ ರೂಪಾಯಿಗಿಂತ ಕಡಿಮೆ [1][ಬಂಡವಾಳ ತೊಡಗಿಸುವ][1] ಲೈಸೆನ್ಸ್‌ದಾರ. | ಐದು ಸಾವಿರ ರೂಪಾಯಿಗಳು. |
| (2) | ಒಂದು ವರ್ಷದಲ್ಲಿ ಒಂದು ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟು ಮತ್ತು ಐದು ಲಕ್ಷಕ್ಕಿಂತ ಕಡಿಮೆ [1][ಬಂಡವಾಳ ತೊಡಗಿಸುವ][1] ಲೈಸೆನ್ಸ್‌ದಾರ. | ಹತ್ತು ಸಾವಿರ ರೂಪಾಯಿಗಳು. |
| (3) | ಒಂದು ವರ್ಷದಲ್ಲಿ ಐದು ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟು ಆದರೆ ಹತ್ತು ಲಕ್ಷಕ್ಕಿಂತ ಕಡಿಮೆ [1][ಬಂಡವಾಳ ತೊಡಗಿಸುವ][1] ಲೈಸೆನ್ಸ್‌ದಾರ. | ಇಪ್ಪತ್ತೈದು ಸಾವಿರ ರೂಪಾಯಿಗಳು. |
| (4) | ಒಂದು ವರ್ಷದಲ್ಲಿ ಹತ್ತು ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟು [1][ಬಂಡವಾಳ ತೊಡಗಿಸುವ][1] ಲೈಸೆನ್ಸ್‌ದಾರ. | ಐವತ್ತು ಸಾವಿರ ರೂಪಾಯಿಗಳು. |

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) (2)ನೇ ಉಪ ಪ್ರಕರಣದ ಉದ್ದೇಶಗಳಿಗಾಗಿ, ಲೈಸೆನ್ಸ್‌ದಾರನು ಒಂದು ವರ್ಷದಲ್ಲಿ ಸಂದಾಯ ಮಾಡಬೇಕಾದ ಭದ್ರತೆಯ ಮೊಬಲಗನ್ನು [1][ಅವನು ಹಿಂದಿನ ವರ್ಷದ ಅವಧಿಯಲ್ಲಿ ವ್ಯವಹಾರದಲ್ಲಿ ತೊಡಗಿಸಿದ ಮೊತ್ತ ವನ್ನು ಆಧರಿಸಿ ನಿರ್ಧರಿಸತಕ್ಕದ್ದು. [2][ಮತ್ತು ಅಂಥ ಭದ್ರತಾ ಠೇವಣಿಗೆ ಯಾವುದೇ ಬಡ್ಡಿ ಇರತಕ್ಕದ್ದಲ್ಲ: ][2]][1]

ಪರಂತು, ಹೊಸ ಲೈಸೆನ್ಸ್‌ದಾರನ ಅಥವಾ ಹಿಂದಿನ ವರ್ಷದ ಒಂದು ಭಾಗಕ್ಕೆ ಮಾತ್ರ ಲೈಸೆನ್ಸ್ ದಾರನಾಗಿದ್ದ ವ್ಯಕ್ತಿಯ ಸಂದರ್ಭದಲ್ಲಿ, ಭದ್ರತಾ ಮೊಬಲಗನ್ನು, ವರ್ಷದ ಅವಧಿಯಲ್ಲಿ ಅವನು [1][ಬಂಡವಾಳ ತೊಡಗಿಸುವ][1] ಸಂಭವವಿರುವ ಮೊಬಲಗಿಗೆ ಸಂಬಂಧಿಸಿದಂತೆ ನಿಯಮಿಸಲಾದ ನಮೂನೆಯಲ್ಲಿ, ನಿಯಮಿಸಲಾದ ರೀತಿಯಲ್ಲಿ ರಿಜಿಸ್ಟ್ರಾರರ ಮುಂದೆ ದಾಖಲು ಮಾಡಿದ ಘೋಷಣೆಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು.

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 31.5.1985 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**7 ಬಿ. ಭದ್ರತಾ ಠೇವಣಿಯ ಮುಟ್ಟುಗೋಲು.-** (1) ಲೈಸೆನ್ಸ್‌ದಾರನು,-

(ಎ) ಈ ಅಧಿನಿಯಮದ ಅಥವಾ ಅವುಗಳ ಅಡಿಯಲ್ಲಿ ರಚಿಸಿದ ನಿಯಮಗಳ ಯಾವುವೇ ಉಪಬಂಧಗಳನ್ನು ಅಥವಾ ಲೈಸೆನ್ಸಿನ ಷರತ್ತುಗಳನ್ನು ಉಲ್ಲಂಘಿಸಿ ಲೇವಾದೇವಿ ವ್ಯವಹಾರವನ್ನು ನಡೆಸುತ್ತಿದ್ದರೆ; ಅಥವಾ

(ಬಿ) 27ನೇ ಪ್ರಕರಣ ಅಥವಾ 38ನೇ ಪ್ರಕರಣ ಅಥವಾ 39ನೇ ಪ್ರಕರಣ ಅಥವಾ 40ನೇ ಪ್ರಕರಣಗಳ ಅಡಿಯಲ್ಲಿನ ಒಂದು ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾಗಿದ್ದರೆ; ಅಥವಾ

(ಸಿ) ತಪ್ಪು ಲೆಕ್ಕಗಳನ್ನು ಇಟ್ಟಿದ್ದರೆ

- ರಿಜಿಸ್ಟ್ರಾರರು, ಯಾವುದೇ ಸಮಯದಲ್ಲಿ, ಲಿಖಿತ ಆದೇಶದ ಮೂಲಕ, 7ಎ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಒದಗಿಸಲಾದ ಭದ್ರತಾ ಠೇವಣಿಯನ್ನು ಪೂರ್ಣವಾಗಿ ಅಥವಾ ಅದರ ಯಾವುದೇ ಭಾಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಇಡಲಾದ ಭದ್ರತಾ ಠೇವಣಿಯನ್ನು ಪೂರ್ಣವಾಗಿ ಅಥವಾ ಅದರ ಯಾವುದೇ ಭಾಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಮುಂಚೆ, ರಿಜಿಸ್ಟ್ರಾರರು ಲೈಸೆನ್ಸ್‌ದಾರನಿಗೆ ಈ ಬಗ್ಗೆ ಕ್ರಮ ಕೈಗೊಳ್ಳಲು ಉದ್ದೇಶಿಸಲಾದ ಕಾರಣಗಳನ್ನು ತಿಳಿಸಿ ಮತ್ತು ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಅದರ ವಿರುದ್ಧ ಕಾರಣ ತೋರಿಸುವಂತೆ ಅವನನ್ನು ಅಗತ್ಯಪಡಿಸಿ ಒಂದು ಲಿಖಿತ ನೋಟೀಸನ್ನು ನೀಡತಕ್ಕದ್ದು.

(3) ಈ ಪ್ರಕರಣದ ಅಡಿಯಲ್ಲಿನ ರಿಜಿಸ್ಟ್ರಾರರ ಪ್ರತಿಯೊಂದು ಆದೇಶವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಲೈಸೆನ್ಸ್‌ದಾರನಿಗೆ ತಿಳಿಸತಕ್ಕದ್ದು.

(4) (1)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ತನಗೆ ಆದೇಶವು ತಲುಪಿದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗಾಗಿ ರಿಜಿಸ್ಟ್ರಾರ್ ಜನರಲ್ ಅವರಿಗೆ ಅಪೀಲು ಹಾಕಿಕೊಳ್ಳಬಹುದು. ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.

(5) ರಿಜಿಸ್ಟ್ರಾರರು, ಮುಟ್ಟುಗೋಲುಹಾಕಿಕೊಂಡ ಮೊಬಲಗಿನ ಪೈಕಿಯಿಂದ, ನಿಯಮಿಸಬಹುದಾದ ಅಂಥ ಮೊಬಲಗನ್ನು ಮತ್ತು ಅಂಥ ದರಗಳಲ್ಲಿ ಲೈಸೆನ್ಸ್‌ದಾರನ ಕೃತ್ಯಗಳಿಂದ ಬಾಧಿತರಾದ ಸಾಲಗಾರರಿಗೆ ಸಂದಾಯ ಮಾಡುವಂತೆ ನಿರ್ದೇಶಿಸಬಹುದು.][2]

**8. ಲೈಸೆನ್ಸ್ ನೀಡಿಕೆಗೆ ನಿರಾಕರಣೆ.-** (1) ಈ ಮುಂದಿನ ಯಾವುವೇ ಕಾರಣಗಳನ್ನು ಹೊರತುಪಡಿಸಿ ಲೈಸೆನ್ಸಿನ ಮಂಜೂರಾತಿಯನ್ನು ನಿರಾಕರಿಸತಕ್ಕದ್ದಲ್ಲ:

(ಎ) ಅರ್ಜಿದಾರನನ್ನು ಅಥವಾ ಲೇವಾದೇವಿದಾರನಾಗಿ ಅವನ ವ್ಯವಹಾರದ ನಿರ್ವಹಣೆಗೆ ಜವಾಬ್ದಾರನಾಗಿರುವ ಅಥವಾ ಜವಾಬ್ದಾರನಾಗಿರಲು ಉದ್ದೇಶಿಸಲಾದ ಯಾರೇ ವ್ಯಕ್ತಿಯನ್ನು, 16ನೇ ಪ್ರಕರಣದ ಅಡಿಯಲ್ಲಿನ ಆದೇಶದ ಮೂಲಕ ಲೈಸೆನ್ಸ್ ಹೊಂದುವುದರಿಂದ ಅನರ್ಹಗೊಳಿಸಿರುವುದು;

(ಬಿ) ಅರ್ಜಿದಾರನು, ಲೈಸೆನ್ಸನ ಮಂಜೂರಾತಿಯ ಅರ್ಜಿಗೆ ಸಂಬಂಧಪಟ್ಟ ಈ ಅಧಿನಿಯಮದ ಅಥವಾ ನಿಯಮಗಳ ಉಪಬಂಧಗಳನ್ನು ಪಾಲಿಸದಿರುವುದು;

(ಸಿ) ಅರ್ಜಿದಾರನು, ಈ ಅಧಿನಿಯಮದ ಅಗತ್ಯತೆಗಳನ್ನು ಪಾಲಿಸಲು ಉದ್ದೇಶ ಪೂರ್ವಕವಾಗಿ ತಪ್ಪಿರುವುದು ಅಥವಾ ತಿಳಿದೂ ತಿಳಿದೂ ಉಲ್ಲಂಘಿಸಿರುವುದು;

(ಡಿ) ಅರ್ಜಿದಾರ ಅಥವಾ ಲೇವಾದೇವಿದಾರನಾಗಿ ಅವನ ವ್ಯವಹಾರದ ನಿರ್ವಹಣೆಗೆ ಜವಾಬ್ದಾರನಾಗಿರುವ ಅಥವಾ ಜವಾಬ್ದಾರನಾಗಿರಲು ಉದ್ದೇಶಿಸಲಾದ ಯಾರೇ ವ್ಯಕ್ತಿಯು,-

(i) ಲೇವಾದೇವಿ ವ್ಯವಹಾರ ನಡೆಸುವಲ್ಲಿ ಅಥವಾ ಅದರ ಸಂಬಂಧದಲ್ಲಿ ತಿಳಿದೂ ತಿಳಿದೂ ಯಾವುದೇ ಮೋಸದಲ್ಲಿ ಅಥವಾ ಅಪ್ರಾಮಾಣಿಕತೆಯಲ್ಲಿ ಭಾಗಿಯಾಗಿರುವ ಬಗ್ಗೆ ಅಥವಾ ಆ ಸಂಬಂಧದಲ್ಲಿ ಪರೋಕ್ಷ ಸಮ್ಮತಿ ನೀಡಿರುವ ಬಗ್ಗೆ; ಅಥವಾ

(ii) ಭಾರತೀಯ ದಂಡ ಸಂಹಿತೆಯ ಅಧ್ಯಾಯ XVII ಅಥವಾ XVIII ರ ಅಡಿಯಲ್ಲಿನ ಅಪರಾಧದ ತಪ್ಪಿತಸ್ಥನೆಂದು ಕಂಡುಬಂದಿರವ ಬಗ್ಗೆ

- ತೃಪ್ತಿಕರ ಸಾಕ್ಷ್ಯವನ್ನು ಒದಗಿಸಿರುವುದು.

(2) ರಿಜಿಸ್ಟ್ರಾರರು, (1)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ಲೈಸೆನ್ಸನ್ನು ನಿರಾಕರಿಸುವುದಕ್ಕೆ ಮುಂಚೆ, ತನಗೆ ಒದಗಿಸಿದ ಸಾಕ್ಷ್ಯವನ್ನು ಮತ್ತು ಅಂಥ ನಿರಾಕರಣೆಗೆ ಇರುವ ಕಾರಣಗಳನ್ನು ದಾಖಲು ಮಾಡತಕ್ಕದ್ದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನ ಆದೇಶದ ವಿರುದ್ಧ ಅಪೀಲನ್ನು ರಿಜಿಸ್ಟ್ರಾರ್ ಜನರಲ್‌ನಿಗೆ ಮಾಡಿಕೊಳ್ಳತಕ್ಕದ್ದು, ಅವರ ತೀರ್ಮಾನವು ಅಂತಿಮವಾಗಿರತ್ಕದ್ದು.

**9. ಲೈಸೆನ್ಸಗಳ ರದ್ದಿಯಾತಿಯ ಸಂಬಂಧದಲ್ಲಿ ರಿಜಿಸ್ಟ್ರಾರನ ಅಧಿಕಾರ.-** (1) ರಿಜಿಸ್ಟ್ರಾರನು, ಯಾವುದೇ ಲೈಸೆನ್ಸಿನ ಅವಧಿಯಲ್ಲಿ, ಅದನ್ನು ಯಾರಿಗೆ ಮಂಜೂರು ಮಾಡಲಾಗಿತ್ತೋ ಆ ವ್ಯಕ್ತಿಯು, 8ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸ್ ನೀಡಿಕೆಯನ್ನು ನಿರಾಕರಿಸಬಹುದಾಗಿದ್ದ ಯಾವುದೇ ಕೃತ್ಯ ಅಥವಾ ನಡವಳಿಕೆಯ ದೋಷಿಯಾಗಿದ್ದನೆಂಬ ಮತ್ತು ಲೈಸೆನ್ಸನ್ನು ಮಂಜೂರು ಮಾಡುವ ಕಾಲದಲ್ಲಿ ಆ ಕೃತ್ಯ ಅಥವಾ ನಡವಳಿಕೆಯ ಬಗ್ಗೆ ತನ್ನ ಗಮನಕ್ಕೆ ತರಲಿಲ್ಲವೆಂಬ ಕಾರಣದ ಮೇಲೆ ಒಂದು ಲಿಖಿತದಲ್ಲಿನ ಆದೇಶದ ಮೂಲಕ ಅದನ್ನು ರದ್ದುಗೊಳಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ, ಒಂದು ಲೈಸೆನ್ಸನ್ನು ರದ್ದುಗೊಳಿಸುವುದಕ್ಕೆ ಮುಂಚೆ, ರಿಜಿಸ್ಟ್ರಾರನು, ಲೈಸೆನ್ಸ್ ದಾರನಿಗೆ ಒಂದು ಲಿಖಿತ ನೋಟೀಸನ್ನು ನೀಡತಕ್ಕದ್ದು ಮತ್ತು ಅವಶ್ಯವಿರಬಹುದಾದಂಥ ವಿಚಾರಣೆಯನ್ನು ನಡೆಸತಕ್ಕದ್ದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ರದ್ದುಗೊಳಿಸುವ ರಿಜಿಸ್ಟ್ರಾರನ ಆದೇಶದ ವಿರುದ್ಧ ಒಂದು ಅಪೀಲನ್ನು ರಿಜಿಸ್ಟ್ರಾರ್ ಜನರಲ್‌ನಿಗೆ ಸಲ್ಲಿಸತಕ್ಕದ್ದು. ಅದರ ಮೇಲಣ ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.

[1][**9ಎ. ಭದ್ರತಾ ಠೇವಣಿಯ ಮರುಸಂದಾಯ:-** ರಿಜಿಸ್ಟ್ರಾರನು, ಲೈಸೆನ್ಸನ್ನು ರದ್ದುಗೊಳಿಸಿದ್ದಲ್ಲಿ, ಅವನು ಲಿಖಿತ ಆದೇಶದ ಮೂಲಕ, ಸಂದಾಯ ಮಾಡಿದ ಆದರೆ 7ಬಿ ಪ್ರಕರಣದ ಅಡಿಯಲ್ಲಿ ಮುಟ್ಟುಗೋಲು ಹಾಕಿಕೊಂಡಿಲ್ಲದ ಭದ್ರತಾ ಠೇವಣಿಯನ್ನು ಹಾಗೆ ಲೈಸೆನ್ಸನ್ನು ರದ್ದುಮಾಡಲಾದ ವ್ಯಕ್ತಿಗೆ ಹಿಂದಿರುಗಿಸತಕ್ಕದ್ದು.][1]

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**10. ಲೈಸೆನ್ಸಿನ ಅವಧಿ.-** ಲೈಸೆನ್ಸಿನ ಅವಧಿಯು, [1][ಐದು ವರ್ಷಗಳ ಒಂದು ಅವಧಿಗೆ][1] ಮಾನ್ಯವಾಗಿರತಕ್ಕದ್ದು:

ಪರಂತು, ಲೈಸೆನ್ಸ್ ಹೊಂದಿರುವ ಲೇವಾದೇವಿದಾರನು, 6ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ನಿಯಮಿಸಲಾದ ದಿನಾಂಕಕ್ಕಿಂತ ಮುಂಚೆ, ಅನಂತರದ [1][ಅವಧಿ][1] ಗೆ ಸಂಬಂಧಿಸಿದಂತೆ ಒಂದು ಹೊಸ ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸಿದ್ದರೆ, ಅಂಥ ಲೇವಾದೇವಿದಾರನನ್ನು ಅವನ ಲೈಸೆನ್ಸಿನ ಅವಧಿಯು ಮುಗಿಯದಿದ್ದಾಗ್ಯೂ ಹೊಸ ಲೈಸೆನ್ಸಿಗಾಗಿ ಹಾಕಿಕೊಂಡ ಅವನ ಅರ್ಜಿಗೆ ಸಂಬಂಧಿಸಿದಂತೆ ಅವನು ಮುಂದಿನ ಆದೇಶಗಳನ್ನು ಸ್ವೀಕರಿಸುವವರೆಗೆ ಅವನು ಒಂದು ಮಾನ್ಯವಾದ ಲೈಸೆನ್ಸನ್ನು ಹೊಂದಿರುವನೆಂದು ಭಾವಿಸತಕ್ಕದ್ದು.

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**ವಿವರಣೆ:**- ವರ್ಷದ ಮಧ್ಯದ ಅವಧಿಯಲ್ಲಿ ಒಂದು ಲೈಸೆನ್ಸನ್ನು ಮಂಜೂರು ಮಾಡಿದ್ದಲ್ಲಿ, ಲೈಸೆನ್ಸ್ ಅವಧಿಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ, ವರ್ಷದ ಉಳಿದ ಭಾಗವನ್ನು ಒಂದು ವರ್ಷವೆಂದು ಭಾವಿಸತಕ್ಕದ್ದು.][1]

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**11.**[1][X X X][1]**ಲೈಸೆನ್ಸ್ ಹೊಂದಿರದ ಲೇವಾದೇವಿದಾರರು ದಾವೆಗಳನ್ನು ಹೂಡುವುದು.-** (1) ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದಿಂದ ಆರು ತಿಂಗಳುಗಳು ಮುಕ್ತಾಯವಾದ ತರುವಾಯ, ದಾವೆಗೆ ಸಂಬಂಧಿಸಿದಂತೆ ಸಾಲ ಅಥವಾ ಅದರ ಯಾವುದೇ ಭಾಗವನ್ನು ನೀಡುವ ಕಾಲದಲ್ಲಿ [2][ಮತ್ತು ಅಂಥ ದಾವೆಯನ್ನು ಹೂಡಲಾದ ದಿನಾಂಕದಂದು][2] ಲೇವಾದೇವಿದಾರನು ಒಂದು ಮಾನ್ಯವಾದ ಲೈಸೆನ್ಸನ್ನು ಹೊಂದಿದ್ದನೆಂಬುದನ್ನು ನ್ಯಾಯಾಲಯವು ಖಚಿತಪಡಿಸಿಕೊಂಡ ಹೊರತು, ಯಾವುದೇ ನ್ಯಾಯಾಲಯವು, ಒಬ್ಬ ಲೇವಾದೇವಿದಾರನು ಹೂಡಿರುವ ಈ ಅಧಿನಿಯಮವು ಅನ್ವಯಿಸುವ ಯಾವುದೇ ದಾವೆಯಲ್ಲಿ ಲೇವಾದೇವಿದಾರನ ಪರವಾಗಿ ಒಂದು ಡಿಕ್ರಿಯನ್ನು ಹೊರಡಿಸತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2) X X X

(3) X X X

(4) X X X][1]

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(5) ಈ ಅಧಿನಿಯಮದಲ್ಲಿ ಇರುವುದು ಯಾವುದೂ,-

(ಎ) ಈ ಅಧಿನಿಯಮವು ಜಾರಿಗೆ ಬರುವ ದಿನಾಂಕಕ್ಕಿಂತ ಮುಂಚೆ ಲೇವಾದೇವಿದಾರನು ನೀಡಿದ ಸಾಲಗಳಿಗೆ ಸಂಬಂಧಿಸಿದ ದಾವೆಗಳನ್ನು;

(ಬಿ) ಲೇವಾದೇವಿದಾರನ ಸ್ವತ್ತನ್ನು ವಸೂಲು ಮಾಡುವುದಕ್ಕೆ ಸಂಬಂಧಿಸಿದಂತೆ, ಮೈಸೂರು ದಿವಾಳಿತನ ಅಧಿನಿಯಮ, 1925ರ ಅಡಿಯಲ್ಲಿ ಅಥವಾ ರಾಜ್ಯದ ಯಾವುದೇ ಪ್ರದೇಶದಲ್ಲಿ ಜಾರಿಯಲ್ಲಿರುವ ಇತರ ಸಂವಾದಿ ಕಾನೂನಿನ ಮೇರೆಗೆ ಒಬ್ಬ ಅಧಿಕೃತ ಸ್ವೀಕರ್ತನ, ಆಡಳಿತಗಾರನ ಅಥವಾ ನ್ಯಾಯಾಲಯದ ಅಥವಾ ಕಂಪನಿಗಳ ಅಧಿನಿಯಮ, 1956ರ ಮೇರೆಗಿನ ಒಬ್ಬ ಸಮಾಪನಕಾರನ ಅಧಿಕಾರಗಳನ್ನು

- ಬಾಧಿಸತಕ್ಕದ್ದಲ್ಲ.

[1][12. X X X][1]

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**13. ಲೈಸೆನ್ಸ್ ರದ್ದಿಯಾತಿಗಾಗಿ ಅರ್ಜಿ.-** (1) ಯಾರೇ ವ್ಯಕ್ತಿಯು, ಒಂದು ಲೈಸೆನ್ಸ್ ಜಾರಿಯಲ್ಲಿರುವ ಅವಧಿಯಲ್ಲಿ, ಒಬ್ಬ ಲೇವಾದೇವಿದಾರನು, 8ನೇ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನು ಲೈಸೆನ್ಸಿನ ಮಂಜೂರಾತಿಯನ್ನು ತಿರಸ್ಕರಿಸಬಹುದಾದ ಯಾವುದೇ ಕೃತ್ಯ ಅಥವಾ ವರ್ತನೆಯ ತಪ್ಪಿತಸ್ಥನಾಗಿರುವನೆಂಬ ಕಾರಣದ ಮೇಲೆ ಅಂಥ ಲೇವಾದೇವಿದಾರನಿಗೆ ನೀಡಲಾದ ಲೈಸೆನ್ಸನ್ನು ರದ್ದುಮಾಡುವುದಕ್ಕಾಗಿ ರಿಜಿಸ್ಟ್ರಾರನಿಗೆ ಅರ್ಜಿ ಸಲ್ಲಿಸಬಹುದು. ಸದರಿ ವ್ಯಕ್ತಿಯು, ಅರ್ಜಿಯನ್ನು ಸಲ್ಲಿಸುವ ಕಾಲಕ್ಕೆ ರಿಜಿಸ್ಟ್ರಾರನು ನಿರ್ದೇಶಿಸಬಹುದಾದಂತೆ, ಒಂದು ನೂರು ರೂಪಾಯಿಗಳನ್ನು ಮೀರದ ಮೊಬಲಗನ್ನು ಠೇವಣಿ ಇಡತಕ್ಕದ್ದು.

(2) ಅಂಥ ಅರ್ಜಿ ಮತ್ತು ಠೇವಣಿಯನ್ನು ಸ್ವೀಕರಿಸಿದ ಮೇಲೆ ರಿಜಿಸ್ಟ್ರಾರನು ಒಂದು ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ಲೇವಾದೇವಿದಾರನು ಅಂಥ ಕೃತ್ಯ ಅಥವಾ ವರ್ತನೆಯ ತಪ್ಪಿತಸ್ಥನೆಂದು ಅವನಿಗೆ ಮನದಟ್ಟಾದರೆ, ಅವನು ಲೇವಾದೇವಿದಾರನ ಲೈಸೆನ್ಸ್‌ನ್ನು ರದ್ದುಪಡಿಸಬಹುದು ಮತ್ತು (1)ನೇ ಉಪ ಪ್ರಕರಣದ ಅಡಿಯಲ್ಲಿ ಇಡಲಾದ ಠೇವಣಿಯನ್ನು ಹಿಂದಿರುಗಿಸುವಂತೆ ನಿರ್ದೇಶಿಸಬಹುದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಸಲ್ಲಿಸಲಾದ ಅರ್ಜಿಯು, ಕ್ಷುಲ್ಲಕವಾದುದೆಂದು ಅಥವಾ ಕಿರುಕುಳಕಾರಿಯಾದುದೆಂದು ರಿಜಿಸ್ಟ್ರಾರನು ಅಭಿಪ್ರಾಯಪಟ್ಟರೆ, ಅವನು (1)ನೇ ಉಪ ಪ್ರಕರಣದ ಅಡಿಯಲ್ಲಿ ಇಡಲಾದ ಠೇವಣಿ ಪೈಕಿಯಿಂದ ತಾನು ಸೂಕ್ತವೆಂದು ಭಾವಿಸುವಂಥ ಮೊಬಲಗನ್ನು ನಷ್ಟ ಪರಿಹಾರವಾಗಿ ಲೇವಾದೇವಿದಾರನಿಗೆ ನೀಡುವಂತೆ ನಿರ್ದೇಶಿಸಬಹುದು.

(4) (2) ಅಥವಾ (3)ನೇ ಉಪ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ನಿಯಮಿಸಬಹುದಾದ ಅಂಥ ಕಾಲದೊಳಗೆ ಮತ್ತು ಅಂಥ ಫೀಜನ್ನು ಸಂದಾಯ ಮಾಡಿದ ಮೇಲೆ, ರಿಜಿಸ್ಟ್ರಾರ್ ಜನರಲ್‌ನಿಗೆ ಅಪೀಲು ಸಲ್ಲಿಸಬಹುದು ಮತ್ತು ಅಂಥ ಅಪೀಲಿನ ಮೇಲಣ ರಿಜಿಸ್ಟ್ರಾರ್ ಜನರಲ್‌ನ ಆದೇಶವು ಅಂತಿಮವಾಗಿರತಕ್ಕದ್ದು.

**14. ರಿಜಿಸ್ಟ್ರಾರನು ಮತ್ತು ಸಹಾಯಕ ರಿಜಿಸ್ಟ್ರಾರನು ಸಿವಿಲ್ ನ್ಯಾಯಾಲಯದ ಅಧಿಕಾರವನ್ನು ಹೊಂದಿರುವುದು.-** 7 ಮತ್ತು 13ನೇ ಪ್ರಕರಣಗಳ ಉದ್ದೇಶಗಳಿಗಾಗಿ, ರಿಜಿಸ್ಟ್ರಾರನು ಮತ್ತು ಸಹಾಯಕ ರಿಜಿಸ್ಟ್ರಾರನು ಈ ಮುಂದಿನ ವಿಷಯಗಳಿಗೆ ಸಂಬಂಧಿಸಿದಂತೆ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ, ಸಿವಿಲ್ ನ್ಯಾಯಾಲಯದಲ್ಲಿ ನಿಹಿತವಾದಂತಹವೇ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಚಲಾಯಿಸತಕ್ಕದ್ದು:-

(ಎ) ಯಾರೇ ವ್ಯಕ್ತಿಯ ಹಾಜರಾತಿಯನ್ನು ಒತ್ತಾಯಿಸುವುದು ಮತ್ತು ಅವನನ್ನು ಪ್ರಮಾಣ ವಚನದ ಮೇಲೆ ಪರೀಕ್ಷಿಸುವುದು;

(ಬಿ) ದಸ್ತಾವೇಜುಗಳು ಮತ್ತು ಭೌತಿಕ ಪದಾರ್ಥಗಳನ್ನು ಹಾಜರುಪಡಿಸುವಂತೆ ಒತ್ತಾಯಿಸುವುದು;

(ಸಿ) ಸಾಕ್ಷಿದಾರರ ಪರೀಕ್ಷೆಗಾಗಿ ಕಮೀಷನುಗಳನ್ನು ಹೊರಡಿಸುವುದು; ಮತ್ತು

(ಡಿ) ಶಪಥ ಪತ್ರಗಳ ಮೂಲಕ ವಿಷಯಗಳನ್ನು ರುಜುವಾತುಪಡಿಸುವುದು.

[1][**15. ದಾಖಲೆಗಳನ್ನು ಅಥವಾ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಅಗತ್ಯಪಡಿಸುವ ಬಗ್ಗೆ ಪ್ರಾಧಿಕೃತ ಅಧಿಕಾರಿಗೆ ಇರುವ ಅಧಿಕಾರ ಮತ್ತು ಪ್ರವೇಶದ, ಪರಿಶೀಲನೆಯ ಮತ್ತು ಜಪ್ತಿಯ ಅಧಿಕಾರ.-** (1) ರಿಜಿಸ್ಟ್ರಾರನು, ಸಹಾಯಕ ರಿಜಿಸ್ಟ್ರಾರನು ಅಥವಾ ಈ ಸಂಬಂಧವಾಗಿ ರಾಜ್ಯ ಸರ್ಕಾರದಿಂದ ಪ್ರಾಧಿಕೃತನಾದ ಯಾರೇ ಅಧಿಕಾರಿಯು, ಲೇವಾದೇವಿ ವ್ಯವಹಾರವನ್ನು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ನಡೆಸಲಾಗುತ್ತಿದೆಯೇ ಎಂಬುದನ್ನು ಪರಿಶೀಲಿಸುವ ಉದ್ದೇಶಕ್ಕಾಗಿ, ಲೇವಾದೇವಿದಾರನ ಅಥವಾ ಲೇವಾದೇವಿ ವ್ಯವಹಾರವನ್ನು ನಡೆಸುತ್ತಿದ್ದಾನೆ ಎಂದು ತಾವು ಅಭಿಪ್ರಾಯಪಡುವ ಯಾರೇ ವ್ಯಕ್ತಿಯ ಆವರಣವನ್ನು ಪ್ರವೇಶಿಸಬಹುದು ಮತ್ತು ಅಂಥ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ದಾಖಲೆ ಅಥವಾ ದಸ್ತಾವೇಜನ್ನು ಹಾಜರುಪಡಿಸುವಂತೆ ಅವನನ್ನು ಕೇಳಬಹುದು ಮತ್ತು ಅಂಥ ಪ್ರತಿಯೊಬ್ಬ ಲೇವಾದೇವಿದಾರನು ಅಥವಾ ವ್ಯಕ್ತಿಯು, ಅಂಥ ಪರಿಶೀಲನೆಗೆ ಅವಕಾಶ ಕಲ್ಪಿಸಿಕೊಡತಕ್ಕದ್ದು ಮತ್ತು ಅಂಥ ದಾಖಲೆ ಅಥವಾ ದಸ್ತಾವೇಜನ್ನು ಹಾಜರುಪಡಿಸತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ರಿಜಿಸ್ಟ್ರಾರನು, ಸಹಾಯಕ ರಿಜಿಸ್ಟ್ರಾರನು ಅಥವಾ ಇತರ ಅಧಿಕಾರಿಯು, ಸದರಿ ಉಪ ಪ್ರಕರಣದ ಉದ್ದೇಶಗಳಿಗಾಗಿ, ಆವರಣಗಳನ್ನು ಶೋಧನೆ ಮಾಡತಕ್ಕದ್ದು ಮತ್ತು ಅವಶ್ಯವಿರಬಹುದಾದಂಥ ಯಾವುದೇ ದಾಖಲೆ ಮತ್ತು ದಸ್ತಾವೇಜನ್ನು ಜಪ್ತಿ ಮಾಡಬಹುದು. ಜಪ್ತಿ ಮಾಡಲಾದ ದಾಖಲೆ ಅಥವಾ ದಸ್ತಾವೇಜನ್ನು ಪರಿಶೀಲನೆಗಾಗಿ, ಕಾನೂನು ವ್ಯವಹರಣೆ ಜರುಗಿಸುವುದಕ್ಕಾಗಿ ಅಥವಾ ಇತರ ಕಾನೂನುಬದ್ಧ ಕ್ರಮಗಳಿಗಾಗಿ ಅವಶ್ಯವಿರಬಹುದಾದಂಥ ಅವಧಿಯವರೆಗೆ ಮಾತ್ರ ಇಟ್ಟುಕೊಳ್ಳತಕ್ಕದ್ದು:

ಪರಂತು, ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) 100 ಮತ್ತು 102ನೇ ಪ್ರಕರಣಗಳ ಉಪಬಂಧಗಳು, ಆದಷ್ಟೂ ಮಟ್ಟಿಗೆ, ಶೋಧನೆ ಮತ್ತು ಜಪ್ತಿಗೆ ಅನ್ವಯವಾಗತಕ್ಕದ್ದು:

ಮತ್ತೂ ಪರಂತು, ಜಪ್ತಿ ಮಾಡಲಾದ ಪ್ರತಿಯೊಂದು ದಾಖಲೆ ಅಥವಾ ದಸ್ತಾವೇಜಿಗೆ ಸಂಬಂಧಿಸಿದಂತೆ, ಯಾರ ಅಭಿರಕ್ಷೆಯಿಂದ ಅದನ್ನು ಜಪ್ತಿ ಮಾಡಲಾಯಿತೋ ಆ ವ್ಯಕ್ತಿಗೆ ಸೂಕ್ತ ಸ್ವೀಕೃತಿ ಪತ್ರವನ್ನು ನೀಡತಕ್ಕದ್ದು.

(3) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ರಿಜಿಸ್ಟ್ರಾರನು, ಸಹಾಯಕ ರಿಜಿಸ್ಟ್ರಾರನು ಅಥವಾ ಇತರ ಅಧಿಕಾರಿಯು, ಸಂಬಂಧಪಟ್ಟ ಮಾಹಿತಿಯನ್ನು ಒದಗಿಸುವ ಸ್ಥಿತಿಯಲ್ಲಿ ಇರುವನೆಂದು ತಾನು ಅಭಿಪ್ರಾಯಪಡುವ ಲೇವಾದೇವಿದಾರನನ್ನು ಅಥವಾ ಯಾರೇ ವ್ಯಕ್ತಿಯನ್ನು ಸಮನು ಮಾಡುವ ಮತ್ತು ಪರೀಕ್ಷಿಸುವ ಅಧಿಕಾರವನ್ನು ಸಹ ಹೊಂದಿರತಕ್ಕದ್ದು.][1]

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**16. ಲೈಸೆನ್ಸನ್ನು ರದ್ದುಪಡಿಸಲು ಅಥವಾ ಅಮಾನತುಗೊಳಿಸಲು ನ್ಯಾಯಾಲಯದ ಅಧಿಕಾರ.-** (1) (i) ಈ ಅಧಿನಿಯಮದ ಅಡಿಯಲ್ಲಿನ ಒಂದು ಅಪರಾಧಕ್ಕಾಗಿ ಒಬ್ಬ ಲೇವಾದೇವಿದಾರನ ವಿರುದ್ಧ ಅಪರಾಧದ ಒಂದು ಆದೇಶವನ್ನು ಹೊರಡಿಸುವ ನ್ಯಾಯಾಲಯವು, ಅಥವಾ (ii) ಈ ಅಧಿನಿಯಮವು ಅನ್ವಯವಾಗುವ ದಾವೆಯನ್ನು ವಿಚಾರಣೆ ನಡೆಸುವ ಒಂದು ನ್ಯಾಯಾಲಯವು, ತನ್ನ ಅಭಿಪ್ರಾಯದಲ್ಲಿ ಅಂಥ ಲೇವಾದೇವಿದಾರನು, ಈ ಅಧಿನಿಯಮ ಅಥವಾ ನಿಯಮಗಳ ಯಾವುದೇ ಉಪಬಂಧವನ್ನು ಹಾಗೆ ಉಲ್ಲಂಘಿಸಿರುವುದಾಗಿ ಅದಕ್ಕೆ ಮನದಟ್ಟಾಗಿದ್ದು, ಅದು ಲೇವಾದೇವಿ ವ್ಯವಹಾರ ನಡೆಸಲು ಅವನನ್ನು ಅನರ್ಹಗೊಳಿಸಿದೆ ಎಂದು ಅಭಿಪ್ರಾಯಪಟ್ಟಲ್ಲಿ,-

(ಎ) ರಾಜ್ಯದಲ್ಲಿ ಅಂಥ ಲೇವಾದೇವಿದಾರನು ಹೊಂದಿರುವ ಎಲ್ಲ ಲೈಸೆನ್ಸ್‌ಗಳನ್ನು ತಾನು ಉಚಿತವೆಂದು ಭಾವಿಸುವಷ್ಟು ಅವಧಿಯವರೆಗೆ ರದ್ದುಗೊಳಿಸಬಹುದೆಂದು ಅಥವಾ ಅಮಾನತುಗೊಳಿಸಬಹುದೆಂದು ಆದೇಶಿಸಬಹುದು; ಮತ್ತು

(ಬಿ) ತಾನು ಸೂಕ್ತವೆಂದು ಭಾವಿಸಿದರೆ, ಅಂಥ ಯಾರೇ ಲೇವಾದೇವಿದಾರನನ್ನು ಅಥವಾ ಯಾರೇ ಲೇವಾದೇವಿದಾರನು ಒಂದು ಹಿಂದೂ ಅವಿಭಕ್ತ ಕುಟುಂಬದವನಾಗಿದ್ದರೆ, ಒಂದು ಕಂಪನಿಯಾಗಿದ್ದರೆ ಅಥವಾ ನಿಗಮಿತವಲ್ಲದ ನಿಕಾಯವಾಗಿದ್ದರೆ ಅಂಥ ಕುಟುಂಬ, ಕಂಪನಿ ಅಥವಾ ನಿಕಾಯವನ್ನು ಅಂಥ ಕುಟುಂಬ, ಕಂಪನಿ ಅಥವಾ ನಿಕಾಯವು ನಡೆಸುವ ಲೇವಾದೇವಿ ವ್ಯವಹಾರದ ನಿರ್ವಹಣೆಗೆ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯನ್ನೂ ಸಹ ನ್ಯಾಯಾಲಯವು ಸೂಕ್ತವೆಂದು ಭಾವಿಸುವಂಥ ಕಾಲದವರೆಗೆ, ರಾಜ್ಯದಲ್ಲಿ ಯಾವುದೇ ಲೈಸೆನ್ಸನ್ನು ಹೊಂದುವುದರಿಂದ ಅನರ್ಹಗೊಳಿಸುವಂತೆ ನಿರ್ದೇಶಿಸಬಹುದು:

ಪರಂತು, ಮಾಡಬೇಕೆಂದು ಉದ್ದೇಶಿಸಲಾದ ಆದೇಶದ ಅಥವಾ ಘೋಷಣೆಯ ವಿರುದ್ಧ ಕಾರಣವನ್ನು ತೋರಿಸುವಂತೆ, ಸಂಬಂಧಪಟ್ಟ ವ್ಯಕ್ತಿಗೆ ಒಂದು ಯುಕ್ತ ಅವಕಾಶವನ್ನು ನೀಡಿದ ಹೊರತು, ಈ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶ ಅಥವಾ ಘೋಷಣೆಯನ್ನು ಮಾಡತಕ್ಕದ್ದಲ್ಲ.

(2) ಒಂದು ನ್ಯಾಯಾಲಯವು, ಈ ಅಧಿನಿಯಮದ ಅಡಿಯಲ್ಲಿ ಒಬ್ಬ ಲೇವಾದೇವಿದಾರನನ್ನು ಒಂದು ಅಪರಾಧದ ತಪ್ಪಿತಸ್ಥನೆಂದು ನಿರ್ಣಯಿಸಿದಲ್ಲಿ ಅಥವಾ (1)ನೇ ಉಪ ಪ್ರಕರಣದ (ಎ) ಅಥವಾ (ಬಿ) ಖಂಡದ ಅಡಿಯಲ್ಲಿ ಆದೇಶ ಅಥವಾ ಘೋಷಣೆಯನ್ನು ಮಾಡಿದಲ್ಲಿ ಅದು, ಅಪರಾಧಿಯೆಂದು ನಿರ್ಣಯಿಸಲಾದ ಲೇವಾದೇವಿದಾರನು ಅಥವಾ ಆದೇಶ ಅಥವಾ ಘೋಷಣೆಯಿಂದ ಬಾಧಿತನಾದ ಯಾರೇ ಇತರ ವ್ಯಕ್ತಿಯು ಹೊಂದಿದ್ದ ಎಲ್ಲ ಲೈಸೆನ್ಸುಗಳ ಮೇಲೆ ಸಂದರ್ಭಾನುಸಾರ ಅಪರಾಧದ ವಿವರ, ಆದೇಶ ಅಥವಾ ಘೋಷಣೆಯ ಬಗ್ಗೆ ಹಿಂಬರಹ ಮಾಡುವಂತೆ ಮತ್ತು ಅದರ ಆದೇಶ ಅಥವಾ ಘೋಷಣೆಯ ಪ್ರತಿಯನ್ನು ಅಂಥ ವಿವರಗಳನ್ನು ರಿಜಿಸ್ಟರುಗಳಲ್ಲಿ ನಮೂದಿಸುವ ಉದ್ದೇಶಕ್ಕಾಗಿ ಲೈಸೆನ್ಸ್‌ಗಳನ್ನು ಮಂಜೂರು ಮಾಡಿದ ರಿಜಿಸ್ಟ್ರಾರನಿಗೆ ಕಳುಹಿಸುವಂತೆ ಮಾಡತಕ್ಕದ್ದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಯಾರೇ ಲೇವಾದೇವಿದಾರನು ಹೊಂದಿದ್ದ ಯಾವುದೇ ಲೈಸೆನ್ಸನ್ನು ಅಮಾನತುಗೊಳಿಸಿದಲ್ಲಿ ಅಥವಾ ರದ್ದುಗೊಳಿಸಿದಲ್ಲಿ ಅಥವಾ ಯಾರೇ ಲೇವಾದೇವಿದಾರನನ್ನು ಲೈಸೆನ್ಸು ಹೊಂದುವುದರಿಂದ ಅನರ್ಹಗೊಳಿಸಿದಲ್ಲಿ, ಆದೇಶವನ್ನು ಹೊರಡಿಸಲಾದ ನ್ಯಾಯಾಲಯದ ತೀರ್ಮಾನದಿಂದಾಗಿ, ಅವನು ಅಂಥ ಆದೇಶದ ವಿರುದ್ಧ, ಸಾಮಾನ್ಯವಾಗಿ ಅಪೀಲು ಹೂಡಬಹುದಾದ ನ್ಯಾಯಾಲಯದಲ್ಲಿ ಅಪೀಲು ಹೂಡಬಹುದು ಮತ್ತು ಆದೇಶವನ್ನು ಹೊರಡಿಸಿದ ನ್ಯಾಯಾಲಯ ಅಥವಾ ಅಪೀಲು ಹೂಡಲಾದ ನ್ಯಾಯಾಲಯವು, ತಾನು ಸೂಕ್ತವೆಂದು ಭಾವಿಸಿದರೆ ಅಪೀಲು ಇತ್ಯರ್ಥವಾಗುವವರೆಗೆ ಈ ಪ್ರಕರಣದ ಅಡಿಯಲ್ಲಿ ಆದೇಶದ ಜಾರಿಯನ್ನು ತಡೆಹಿಡಿಯಬಹುದು.

(3) (2)ನೇ ಉಪ ಪ್ರಕರಣಕ್ಕನುಸಾರವಾಗಿ, ನ್ಯಾಯಾಲಯವು ಹಿಂಬರಹಕ್ಕಾಗಿ ಅಗತ್ಯಪಡಿಸುವ ಯಾವುದೇ ಲೈಸೆನ್ಸನ್ನು, ಅದನ್ನು ಹೊಂದಿರುವ ವ್ಯಕ್ತಿಯು, ನ್ಯಾಯಾಲಯವು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಅವಧಿಯೊಳಗಾಗಿ ಹಾಜರುಪಡಿಸತಕ್ಕದ್ದು ಮತ್ತು ಯಾರೇ ವ್ಯಕ್ತಿಯು, ಯುಕ್ತ ಕಾರಣವಿಲ್ಲದೆ ಹಾಗೆ ಅಗತ್ಯಪಡಿಸಲಾದ ಲೈಸೆನ್ಸನ್ನು ಹಾಜರುಪಡಿಸಲು ತಪ್ಪಿದರೆ, ಅಪರಾಧ ನಿರ್ಣಯವಾದುದರ ಮೇಲೆ ಅವನ ತಪ್ಪಿತವು ಮುಂದುವರಿಯುವ ಅವಧಿಯ ಪ್ರತಿಯೊಂದು ದಿನಕ್ಕೆ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡಕ್ಕೆ ಹೊಣೆಗಾರನಾಗತಕ್ಕದ್ದು.

(4) ಈ ಪ್ರಕರಣದ ಅಡಿಯಲ್ಲಿ ಒಂದು ನ್ಯಾಯಾಲಯಕ್ಕೆ ಪ್ರದತ್ತವಾದ ಅಧಿಕಾರಗಳನ್ನು, ಯಾವುದೇ ನ್ಯಾಯಾಲಯವು ಅಪೀಲು ಅಥವಾ ಪುನರೀಕ್ಷಣೆಯಲ್ಲಿ ಚಲಾಯಿಸಬಹುದು.

**17. ಲೈಸೆನ್ಸಿನ ಅಮಾನತು ಅಥವಾ ರದ್ದಿಯಾತಿಗೆ ನಷ್ಟ ಪರಿಹಾರವಿಲ್ಲದಿರುವುದು.-** ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಲೈಸೆನ್ಸನ್ನು ಅಮಾನತುಗೊಳಿಸಿದ್ದಲ್ಲಿ ಅಥವಾ ರದ್ದುಗೊಳಿಸಿದ್ದಲ್ಲಿ, ಯಾವುದೇ ನಷ್ಟ ಪರಿಹಾರಕ್ಕೆ ಅಥವಾ ಲೈಸೆನ್ಸ್ ಫೀಜಿನ ಮರುಸಂದಾಯಕ್ಕೆ ಯಾವ ವ್ಯಕ್ತಿಯೂ ಹಕ್ಕುಳ್ಳವನಾಗಿರತಕ್ಕದ್ದಲ್ಲ.

**18. ಲೈಸೆನ್ಸಿನ ಅಮಾನತು ಅಥವಾ ರದ್ದಿಯಾತಿಯ ಅವಧಿಯಲ್ಲಿ ವ್ಯಕ್ತಿಗಳು ವ್ಯವಹಾರ ನಡೆಸುವುದನ್ನು ನಿಷೇಧಿಸುವುದು.-** ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ, ಯಾವ ವ್ಯಕ್ತಿಯ ಲೈಸೆನ್ಸನ್ನು ಅಮಾನತುಗೊಳಿಸಲಾಗಿರುವುದೋ ಅಥವಾ ರದ್ದುಗೊಳಿಸಲಾಗಿರುವುದೋ ಆ ವ್ಯಕ್ತಿಯು, ಲೈಸೆನ್ಸ್ ಅಮಾನತುಗೊಂಡ ಅಥವಾ ಸಂದರ್ಭಾನುಸಾರ ರದ್ದುಗೊಂಡ ಅವಧಿಯಲ್ಲಿ ರಾಜ್ಯದಲ್ಲಿ ಲೇವಾದೇವಿ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

**19. ಯಾವ ವ್ಯಕ್ತಿಯ ಲೈಸೆನ್ಸ್‌ನ್ನು ಅಮಾನತುಗೊಳಿಸಲಾಗಿದೆಯೋ ಅಥವಾ ರದ್ದುಗೊಳಿಸಲಾಗಿದೆಯೊ ಆ ವ್ಯಕ್ತಿಯು, ಹಿಂಬರಹದ ಅಥವಾ ಅನರ್ಹತೆಯ ವಿವರಗಳನ್ನು ಕೊಡದೆ ಅರ್ಜಿ ಸಲ್ಲಿಸದಿರುವುದು.-** 16ನೇ ಪ್ರಕರಣದ ಅಡಿಯಲ್ಲಿ ಯಾರ ಲೈಸೆನ್ಸಿಗೆ ಹಿಂಬರಹ ಮಾಡಲಾಗಿದೆಯೋ ಅಥವಾ ಯಾರನ್ನು ಲೈಸೆನ್ಸ್ ಹೊಂದುವುದರಿಂದ ಅನರ್ಹಗೊಳಿಸಲಾಗಿದೆಯೋ ಆ ವ್ಯಕ್ತಿಯು, ಅಂಥ ಹಿಂಬರಹ ಅಥವಾ ಅನರ್ಹತೆಯ ವಿವರಗಳನ್ನು ಕೊಡದೆ ಲೈಸೆನ್ಸ್ ಪಡೆಯಲು ಅರ್ಜಿಯನ್ನು ಸಲ್ಲಿಸತಕ್ಕದ್ದಲ್ಲ ಅಥವಾ ಲೈಸೆನ್ಸ್ ಪಡೆಯಲು ಅರ್ಹನಾಗಿರತಕ್ಕದ್ದಲ್ಲ.

**20. ಲೆಕ್ಕಗಳನ್ನು ಇಡುವುದು ಮತ್ತು ಪ್ರತಿಗಳನ್ನು ಒದಗಿಸುವುದು ಲೇವಾದೇವಿದಾರನ ಕರ್ತವ್ಯ.-** (1) ಪ್ರತಿಯೊಬ್ಬ ಲೇವಾದೇವಿದಾರನು, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ರೀತಿಯಲ್ಲಿ [1][ಕನ್ನಡದಲ್ಲಿ ಅಥವಾ ಇಂಗ್ಲೀಷ್‌ನಲ್ಲಿ][1] ಒಂದು ನಗದಿ ಪುಸ್ತಕವನ್ನು ಮತ್ತು ಖಾತಾ ಪುಸ್ತಕವನ್ನು ಇಡತಕ್ಕದ್ದು.

1. 1987ರ ಅಧಿನಿಯಮ ಸಂಖ್ಯೆ 2ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (ಎ) (i) ಸಾಲವನ್ನು ನೀಡಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸಾಲ ಪಡೆದವನಿಗೆ ನೀಡಲಾದ ಸಾಲದ ಮೊಬಲಗು ಮತ್ತು ದಿನಾಂಕ ಮತ್ತು ವಾಯಿದೆ ಮುಗಿಯುವ ಅವಧಿ, ಸಾಲಕ್ಕೆ ಭದ್ರತೆ ಯಾವುದಾದರೂ ಇದ್ದರೆ, ಅದರ ಸ್ವರೂಪ, ಸಾಲ ಪಡೆದವನ ಮತ್ತು ಲೇವಾದೇವಿದಾರನ ಹೆಸರು ಮತ್ತು ವಿಳಾಸ ಮತ್ತು ವಿಧಿಸಲಾದ ಬಡ್ಡಿಯ ದರ - ಇವುಗಳ ಪೂರ್ಣ ಮತ್ತು ಸುಸ್ಪಷ್ಟ ನಿಬಂಧನೆಗಳನ್ನು ತೋರಿಸುವ ಒಂದು ವಿವರಣ ಪಟ್ಟಿಯನ್ನು [1][ಕನ್ನಡದಲ್ಲಾಗಲಿ ಅಥವಾ ಇಂಗ್ಲೀಷ್‌ನಲ್ಲಾಗಲಿ][1] ಸಾಲ ಪಡೆದವನಿಗೆ:

1. 1987ರ ಅಧಿನಿಯಮ ಸಂಖ್ಯೆ 2ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಲೇವಾದೇವಿದಾರನು, ನಿಯಮಿಸಲಾದ ನಮೂನೆಯಲ್ಲಿರುವ ಮತ್ತು ಸಾಲಗಾರನ ವ್ಯವಹಾರಗಳ ಈವರೆಗಿನ ಲೆಕ್ಕಗಳನ್ನು ಇಟ್ಟಿರುವ ಒಂದು ಪಾಸ್ ಬುಕ್ಕನ್ನು ನೀಡಿದ್ದರೆ, ಸಾಲಗಾರನು ಅಂಥ ಯಾವ ವಿವರಣಾ ಪಟ್ಟಿಯನ್ನೂ ಒದಗಿಸುವ ಅಗತ್ಯವಿರತಕ್ಕದ್ದಲ್ಲ;

(ii) (i)ನೇ ಉಪ ಖಂಡದಲ್ಲಿ ಉಲ್ಲೇಖಿಸಿದ ವಿವರಗಳನ್ನೊಳಗೊಂಡ ಒಂದು ವಿವರಣ ಪಟ್ಟಿಯನ್ನು ಸದರಿ ಅವಧಿಯೊಳಗೆ ಸಹಾಯಕ ರಿಜಿಸ್ಟ್ರಾರನಿಗೆ

- ತಲುಪಿಸತಕ್ಕದ್ದು ಅಥವಾ ತಲುಪುವಂತೆ ಮಾಡತಕ್ಕದ್ದು;

(ಬಿ) ಸಾಲವನ್ನು ಪೂರ್ತಿಯಾಗಿ ಮರು ಸಂದಾಯ ಮಾಡಿದ ಮೇಲೆ, ಸಾಲಗಾರನು ಸಹಿ ಮಾಡಿದ ಪ್ರತಿಯೊಂದು ಹಾಳೆಯ ಮೇಲೆ ಸಂದಾಯವಾಗಿದೆ ಅಥವಾ ರದ್ದಾಗಿದೆ ಎಂಬುದಾಗಿ ಗುರುತು ಮಾಡತಕ್ಕದ್ದು ಮತ್ತು ಪ್ರತಿಯೊಂದು ಅಡಮಾನವನ್ನು ವಿಮೋಚನೆಗೊಳಿಸತಕ್ಕದ್ದು. ಒತ್ತೆ ಇಡಲಾದ ಪ್ರತಿಯೊಂದು ವಸ್ತುವನ್ನು ವಾಪಸು ಕೊಡತಕ್ಕದ್ದು, ಪ್ರತಿಯೊಂದು ನೋಟೀಸನ್ನು ಹಿಂತಿರುಗಿಸತಕ್ಕದ್ದು ಮತ್ತು ಸಾಲಗಾರನು ಸಾಲಕ್ಕೆ ಭದ್ರತೆಯಾಗಿ ನೀಡಿದ ಪ್ರತಿಯೊಂದು ಹಸ್ತಾಂತರ ಪತ್ರವನ್ನು ರದ್ದುಗೊಳಿಸತಕ್ಕದ್ದು ಅಥವಾ ಮರು ಹಸ್ತಾಂತರ ಮಾಡತಕ್ಕದ್ದು.

(3) ಯಾರೇ ಲೇವಾದೇವಿದಾರನು, ಹಣ ಸಂದಾಯ ಮಾಡಿದ ಬಗ್ಗೆ ಸಾಲಗಾರನಿಗೆ ಯುಕ್ತವಾಗಿ ಸಹಿ ಮಾಡಿದ ರಸೀದಿಯನ್ನು ನೀಡದೆ ಯಾವುದೇ ಸಾಲಕ್ಕೆ ಸಂಬಂಧಿಸಿದಂತೆ ಅವನಿಂದ ಯಾವುದೇ ಹಣವನ್ನು ಸ್ವೀಕರಿಸತಕ್ಕದ್ದಲ್ಲ.

(4) ಯಾರೇ ಲೇವಾದೇವಿದಾರನು ಸಾಲಗಾರನಿಂದ ಯಾವುದೇ ವಸ್ತುವಿನ ವಿವರಣೆ, ಅಂದಾಜು ಮೌಲ್ಯ, ಅದರ ಮೇಲೆ ನೀಡಲಾದ ಮೊಬಲಗು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳೊಂದಿಗೆ ತಾನು ಸಹಿ ಮಾಡಿದ ರಸೀದಿಯನ್ನು ನೀಡದೆ ಅದನ್ನು ಗಿರವಿ, ಒತ್ತೆ ಅಥವಾ ಸಾಲದ ಭದ್ರತೆಯಾಗಿ ಅಂಗೀಕರಿಸತಕ್ಕದ್ದಲ್ಲ.

**21. ಲೇವಾದೇವಿದಾರನು ಲೆಕ್ಕಪತ್ರಗಳ ವಿವರಣ ಪಟ್ಟಿ ಮತ್ತು ಅದರ ಪ್ರತಿಗಳನ್ನು ಕಳುಹಿಸುವುದು.-** (1) ಪ್ರತಿಯೊಬ್ಬ ಲೇವಾದೇವಿದಾರನು, ತನ್ನಿಂದ ಸಾಲ ಪಡೆದ ಪ್ರತಿಯೊಬ್ಬ ಸಾಲಗಾರನಿಗೆ, ಪ್ರತಿ ವರ್ಷ ಲೇವಾದೇವಿದಾರನು ಅಥವಾ ಅವನ ಏಜಂಟನು ಸಹಿ ಮಾಡಿದ ಅಂಥ ಸಾಲಗಾರನಿಂದ ಬಾಕಿ ಬರಬೇಕಾಗಿರುವ ಸಾಲದ ಯಾವುದೇ ಮೊಬಲಗಿನ ಬಗ್ಗೆ ಸ್ಫುಟವಾಗಿ ಓದಲು ಬರುವಂಥ ಒಂದು ವಿವರಣ ಪಟ್ಟಿಯನ್ನು ಸಾಲ ಪಡೆದವನಿಗೆ ತಲುಪಿಸತಕ್ಕದ್ದು ಅಥವಾ ತಲುಪುವಂತೆ ಮಾಡತಕ್ಕದ್ದು. ಆ ವಿವರಣ ಪಟ್ಟಿಯು,-

(i) ಲೇವಾದೇವಿದಾರನಿಗೆ ಬಾಕಿ ಬರಬೇಕಾಗಿರುವ ಅಸಲು ಮತ್ತು ಬಡ್ಡಿಯ ಮೊಬಲಗನ್ನು ಪ್ರತ್ಯೇಕವಾಗಿ;

(ii) ಆ ವರ್ಷದಲ್ಲಿ ಸಾಲಕ್ಕೆ ಸಂಬಂಧಿಸಿದಂತೆ, ಲೇವಾದೇವಿದಾರನು ಈಗಾಗಲೇ ಸ್ವೀಕರಿಸಿದ ಎಲ್ಲ ಸಂದಾಯದ ಮೊಬಲಗನ್ನು ಮತ್ತು ಪ್ರತಿಯೊಂದು ಸಂದಾಯದ ದಿನಾಂಕವನ್ನು ;

(iii) ಬಡ್ಡಿಯ ಲೆಕ್ಕಕ್ಕೆ ಮೊದಲು ಜಮೆ ಮಾಡಿದ ಎಲ್ಲ ಸಂದಾಯಗಳನ್ನು ಮತ್ತು ಸಾಲಗಾರನ ಅಸಲಿನ ಲೆಕ್ಕಕ್ಕೆ ಜಮೆ ಮಾಡಲಾದ, ಯಾವುದೇ ಸಂದಾಯ ಮಾಡುವಾಗ ಬಾಕಿ ಇದ್ದ ಬಡ್ಡಿಯ ಶಿಲ್ಕಿನ ವಿಮೋಚನೆಗೆ ಸಾಕಾಗುವುದಕ್ಕಿಂತ ಹೆಚ್ಚಿನ ಯಾವುದೇ ಸಂದಾಯದ ಉಳಿಕೆ, ಯಾವುದಾದರೂ ಇದ್ದರೆ, ಅದನ್ನು, ಅದಕ್ಕೆ ಪರ್ಯಾಯವಾಗಿ ಲೇವಾದೇವಿದಾರನು ನಿರ್ಧರಿಸಬಹುದಾದಂಥ ಅಸಲಿನ ಲೆಕ್ಕಕ್ಕೆ ಜಮೆಯಾದಂಥ ಸಂದಾಯಗಳನ್ನು ಮತ್ತು ಉಳಿದ ಅಸಲಿನ ಮೇಲೆ ಇಳಿತದ ಆಧಾರದಲ್ಲಿ

ಲೆಕ್ಕ ಹಾಕಲಾದ ಬಡ್ಡಿಯ ಲೆಕ್ಕಕ್ಕೆ ಜಮೆಯಾದ ಉಳಿದ ಸಂದಾಯಗಳನ್ನು ಮತ್ತು ಬಡ್ಡಿಯ ಬಾಕಿಯನ್ನು ಪೂರ್ಣವಾಗಿ ಹಿಂದಿರುಗಿಸಿದ್ದರೆ, ಅಸಲಿನ ಲೆಕ್ಕಕ್ಕೆ ಮತ್ತಷ್ಟು ಜಮೆ ಮಾಡಿದ ಸಂದಾಯದ ಶಿಲ್ಕು ಯಾವುದಾದರೂ ಇದ್ದರೆ, ಅದನ್ನು;

(iv) ಸಂದಾಯವಾಗದೆ ಉಳಿದಿರುವ ಅಸಲು ಮತ್ತು ಬಡ್ಡಿಯ ಮೊಬಲಗನ್ನು

- ತೋರಿಸತಕ್ಕದ್ದು.

ವಿವರಣ ಪಟ್ಟಿಗೆ ಲೇವಾದೇವಿದಾರ ಅಥವಾ ಅವನ ಏಜೆಂಟನು ಸಹಿ ಹಾಕತಕ್ಕದ್ದು ಮತ್ತು ಅದು [1][ಕನ್ನಡ ಅಥವಾ ಇಂಗ್ಲೀಷ್][1] ಭಾಷೆಯಲ್ಲಿ ಇರತಕ್ಕದ್ದು. ಅದು ನಿಯಮಿಸಬಹುದಾದ ಅಂಥ ನಮೂನೆಯಲ್ಲಿರತಕ್ಕದ್ದು ಮತ್ತು ಅದನ್ನು ಅಂಥ ದಿನಾಂಕದಂದು ಅಥವಾ ಅದಕ್ಕೂ ಮುಂಚೆ ಸಾಲಗಾರನಿಗೆ ನೀಡತಕ್ಕದ್ದು:

1. 1987ರ ಅಧಿನಿಯಮ ಸಂಖ್ಯೆ 2ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಲೇವಾದೇವಿದಾರನು ನಿಯಮಿಸಲಾದ ನಮೂನೆಯಲ್ಲಿರುವ ಮತ್ತು ಸಾಲಗಾರನೊಂದಿಗಿನ ವ್ಯವಹಾರಗಳ ಇಂದಿನವರೆಗಿನ ಲೆಕ್ಕವನ್ನು ಒಳಗೊಂಡ ಒಂದು ಪಾಸ್ ಬುಕ್ಕನ್ನು ನೀಡಿದ್ದರೆ, ಸಾಲಗಾರನು ಅಂಥ ಯಾವುದೇ ವಿವರಣ ಪಟ್ಟಿಯನ್ನು ಒದಗಿಸುವ ಅಗತ್ಯವಿರತಕ್ಕದ್ದಲ್ಲ.

ಲೇವಾದೇವಿದಾರನು, ಸಹಾಯಕ ರಿಜಿಸ್ಟ್ರಾರನಿಗೆ ಮೇಲೆ ಹೇಳಿದ ದಿನಾಂಕದಂದು ಅಥವಾ ಅದಕ್ಕೂ ಮುಂಚೆ (i) ರಿಂದ (iv)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ವಿವರಗಳನ್ನೊಳಗೊಂಡ ಒಂದು ವಿವರಣ ಪಟ್ಟಿಯನ್ನು ಕಳುಹಿಸತಕ್ಕದ್ದು ಅಥವಾ ಕಳುಹಿಸುವಂತೆ ಮಾಡತಕ್ಕದ್ದು.

(2) ಯಾವುದೇ ನಿರ್ದಿಷ್ಟ ಸಾಲಕ್ಕೆ ಸಂಬಂಧಿಸಿದಂತೆ, ಈ ಅಧಿನಿಯಮವು ಜಾರಿಗೆ ಬಂದ ದಿನಾಂಕಕ್ಕಿಂತ ಮುಂಚೆ ನೀಡಿದುದಾಗಿರಲಿ ಅಥವಾ ತರುವಾಯ ನೀಡಿದುದಾಗಿರಲಿ ಲೇವಾದೇವಿದಾರನು ಸಾಲವನ್ನು ಅಥವಾ ಅದರ ಯಾವುದೇ ಭಾಗವನ್ನು ಮರು ಸಂದಾಯ ಮಾಡದಿರುವ ಅವಧಿಯ ಯಾವುದೇ ಸಮಯದಲ್ಲಿ, ಸಾಲಗಾರನು ಮಾಡಿದ ಲಿಖಿತ ಬೇಡಿಕೆಯ ಮೇಲೆ ಮತ್ತು ನಿಯಮಿಸಲಾದ ಶುಲ್ಕವನ್ನು ಸಂದಾಯ ಮಾಡಿದ ಮೇಲೆ ಸಾಲಗಾರ ಅಥವಾ ಸಾಲಗಾರನು ಬೇಡಿಕೆಯಲ್ಲಿ ಈ ಸಂಬಂಧವಾಗಿ ನಿರ್ದಿಷ್ಟಪಡಿಸಲಾದ ಯಾರೇ ವ್ಯಕ್ತಿಗೆ, ಲೇವಾದೇವಿದಾರನು ಅಥವಾ ಅವನ ಏಜೆಂಟನು ಸಹಿ ಮಾಡಿದ ಮತ್ತು (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸಂಬಂಧಪಟ್ಟ ವಿವರಗಳನ್ನೊಳಗೊಂಡ [1][ಕನ್ನಡ ಭಾಷೆಯಲ್ಲಾಗಲಿ ಅಥವಾ ಇಂಗ್ಲೀಷ್ ಭಾಷೆಯಲ್ಲಾಗಲಿ][1] ಇರುವ ಒಂದು ವಿವರಣ ಪಟ್ಟಿಯನ್ನು ನೀಡಬೇಕೆಂದು ಅಗತ್ಯಪಡಿಸಿದರೆ ಹಾಗೆ ನೀಡತಕ್ಕದ್ದು.

1. 1987ರ ಅಧಿನಿಯಮ ಸಂಖ್ಯೆ 2ರ ಮೂಲಕ 16.10.1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಲೇವಾದೇವಿದಾರನು, ಸಾಲಗಾರನ ಒಂದು ಲಿಖಿತ ಬೇಡಿಕೆಯ ಮೇಲೆ ಮತ್ತು ನಿಯಮಿಸಲಾದ ವೆಚ್ಚಗಳ ಮೊತ್ತವನ್ನು ಸಲ್ಲಿಸಿದ ಮೇಲೆ, ತಾನು ನೀಡಿದ ಸಾಲಕ್ಕೆ ಸಂಬಂಧಿಸಿದಂತೆ ಅಥವಾ ಅದರ ಯಾವುದೇ ಭದ್ರತೆಗೆ ಸಂಬಂಧಿಸಿದಂತೆ, ಯಾವುದೇ ದಸ್ತಾವೇಜಿನ ಒಂದು ಪ್ರತಿಯನ್ನು ಸಾಲಗಾರನಿಗೆ ಅಥವಾ ಸಾಲಗಾರನು ಬೇಡಿಕೆಯಲ್ಲಿ ಈ ಸಂಬಂಧವಾಗಿ ನಿರ್ದಿಷ್ಟಪಡಿಸಿದ ಯಾರೇ ವ್ಯಕ್ತಿಗೆ ನೀಡಬೇಕೆಂದು ಅಗತ್ಯಪಡಿಸಿದರೆ ಅವನಿಗೆ ಹಾಗೆ ನೀಡತಕ್ಕದ್ದು.

[1][(4) XXX][1]

1. 1998ರ ಅಧಿನಿಯಮ ಸಂಖ್ಯೆ 14ರ ಮೂಲಕ 22.5.1998ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**22. ಸಾಲಗಾರನಿಗೆ ಮತ್ತು ಸಹಾಯಕ ರಿಜಿಸ್ಟ್ರಾರನಿಗೆ ಒದಗಿಸಿದ ಕೆಲವು ವಿವರಣ ಪಟ್ಟಿಗಳಿಗೆ ಫೀಜುಗಳು.-** (1) ಲೇವಾದೇವಿದಾರನು, 20ನೇ ಪ್ರಕರಣದ (2)ನೇ ಉಪ ಪ್ರಕರಣ ಅಥವಾ 21ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ, ಸಾಲಗಾರನಿಗೆ ಒದಗಿಸಿದ ವಿವರಣ ಪಟ್ಟಿಗಳಿಗಾಗಿ ಅಥವಾ ಪಾಸ್ ಬುಕ್‌ಗಾಗಿ ಮತ್ತು ಅಂಥ ವಿವರಣ ಪಟ್ಟಿಗಳನ್ನು ಸದರಿ ಉಪ ಪ್ರಕರಣಗಳ ಅಡಿಯಲ್ಲಿ ಸಹಾಯಕ ರಿಜಿಸ್ಟ್ರಾರನಿಗೆ ಒದಗಿಸಿದ್ದಕ್ಕಾಗಿ ಸಾಲಗಾರನಿಂದ ಫೀಜುಗಳನ್ನು ವಸೂಲು ಮಾಡಬಹುದು.

(2) ಅಂಥ ಫೀಜುಗಳು, ಸಾಲಗಾರನಿಗೆ ಅಥವಾ ಸಹಾಯಕ ರಿಜಿಸ್ಟ್ರಾರನಿಗೆ ಒದಗಿಸಿದ ವಿವರಣ ಪಟ್ಟಿಗಳ ಅಥವಾ ಅವುಗಳ ಪ್ರತಿಗಳ ಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳದೆ, ವರ್ಷವೊಂದಕ್ಕೆ ಒಬ್ಬ ಸಾಲಗಾರನಿಗೆ ಗರಿಷ್ಠ ಎರಡು ರೂಪಾಯಿಗಳಿಗೆ ಒಳಪಟ್ಟು, ನಿಯಮಿಸಬಹುದಾದಂಥ ದರಗಳಲ್ಲಿ ಮತ್ತು ಅಂಥ ರೀತಿಯಲ್ಲಿ ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

**23. ಸಾಲಗಾರರು ಲೆಕ್ಕಗಳ ಯಥಾರ್ಥತೆಯನ್ನು ಅಂಗೀಕರಿಸಲು ಬದ್ಧರಾಗಿರದಿರುವುದು.-** 20 ಅಥವಾ 21ನೇ ಪ್ರಕರಣದ ಅಡಿಯಲ್ಲಿ ಲೆಕ್ಕಗಳ ಒಂದು ವಿವರಣ ಪಟ್ಟಿಯನ್ನು ಅಥವಾ ಒಂದು ಪಾಸ್ ಬುಕ್ಕನ್ನು ಒದಗಿಸಲಾಗಿರುವ ಒಬ್ಬ ಸಾಲಗಾರನು, ಅದರ ಯಥಾರ್ಥತೆಯನ್ನು ಒಪ್ಪಿಕೊಳ್ಳಲು ಅಥವಾ ನಿರಾಕರಿಸಲು ಬದ್ಧನಾಗಿರತಕ್ಕದ್ದಲ್ಲ ಮತ್ತು ಅವನು ಹಾಗೆ ಮಾಡಲು ತಪ್ಪಿದ ಕಾರಣಮಾತ್ರದಿಂದಲೇ ಲೆಕ್ಕಗಳ ಯಥಾರ್ಥತೆಯನ್ನು ಅಂಗೀಕರಿಸಿರುವನೆಂದು ಭಾವಿಸತಕ್ಕದ್ದಲ್ಲ.

**24. ಸಾಲಗಳಿಗೆ ಸಂಬಂಧಿಸಿದ ದಾವೆಗಳಲ್ಲಿ ನ್ಯಾಯಾಲಯದ ಕಾರ್ಯ ವಿಧಾನ.-** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮವು ಅನ್ವಯವಾಗತಕ್ಕ ಯಾವುದೇ ದಾವೆಯಲ್ಲಿ,-

(ಎ) ನ್ಯಾಯಾಲಯವು, ಕ್ಲೇಮನ್ನು ಗುಣಾವಗುಣಗಳ ಮೇಲೆ ತೀರ್ಮಾನಿಸುವುದಕ್ಕೆ ಮುಂಚೆ, ಲೇವಾದೇವಿದಾರನು 20 ಮತ್ತು 21ನೇ ಉಪಬಂಧಗಳನ್ನು ಪಾಲಿಸಿದ್ದಾನೆಯೇ ಹೇಗೆ ಎಂಬ ವಿವಾದಾಂಶವನ್ನು ನಿರೂಪಿಸತಕ್ಕದ್ದು ಮತ್ತು ಆ ಬಗ್ಗೆ ತೀರ್ಮಾನಿಸತಕ್ಕದ್ದು;

(ಬಿ) 20 ಅಥವಾ 21ನೇ ಪ್ರಕರಣದ ಉಪಬಂಧಗಳನ್ನು ಲೇವಾದೇವಿದಾರನು ಪಾಲಿಸಿಲ್ಲವೆಂದು ನ್ಯಾಯಾಲಯಕ್ಕೆ ಕಂಡು ಬಂದರೆ, ಅದು ವಾದಿಯ ಕ್ಲೇಮು ಪೂರ್ತಿಯಾಗಿ ಅಥವಾ ಭಾಗಶಃ ರುಜುವಾತಾದರೆ ಅದು, ಪ್ರಕರಣದ ಸನ್ನಿವೇಶಗಳಿಗೆ ಅನುಸಾರವಾಗಿ ತನಗೆ ಸೂಕ್ತವೆಂದು ಕಂಡು ಬರಬಹುದಾದ ಬಾಕಿ ಇರುವಂಥ ಬಡ್ಡಿಯನ್ನು ಪೂರ್ಣವಾಗಿ ಅಥವಾ ಅದರ ಯಾವುದೇ ಭಾಗವನ್ನು ತಳ್ಳಿಹಾಕಬಹುದು ಮತ್ತು ವೆಚ್ಚಗಳನ್ನು ತಿರಸ್ಕರಿಸಬಹುದು.

**ವಿವರಣೆ.-** ನಿಯಮಿಸಲಾದ ನಮೂನೆಯಲ್ಲಿ ಮತ್ತು ವಿಧಾನದಲ್ಲಿ ರಸೀದಿಯನ್ನು ನೀಡಿದ ಅಥವಾ ಲೆಕ್ಕಗಳ ಒಂದು ವಿವರಣ ಪಟ್ಟಿಯನ್ನು ಅಥವಾ ಒಂದು ಪಾಸ್ ಬುಕ್ಕನ್ನು ನೀಡಿರುವ ಒಬ್ಬ ಲೇವಾದೇವಿದಾರನು, ಅವುಗಳಲ್ಲಿ ಯಾವುವೇ ತಪ್ಪುಗಳು ಅಥವಾ ಲೋಪಗಳಿದ್ದಾಗ್ಯೂ, ಅಂಥ ಯಾವುವೇ ತಪ್ಪುಗಳನ್ನು ಮತ್ತು ಲೋಪಗಳನ್ನು ಗಣನೀಯವಾದವುಗಳಲ್ಲ ಅಥವಾ ಮೋಸದಿಂದಾದವುಗಳಲ್ಲ ಎಂದು ನ್ಯಾಯಾಲಯವು ನಿರ್ಣಯಿಸಿದರೆ, 20ನೇ ಪ್ರಕರಣ ಅಥವಾ ಸಂದರ್ಭಾನುಸಾರ 21ನೇ ಪ್ರಕರಣದ ಉಪಬಂಧಗಳನ್ನು ಪಾಲಿಸಿದ್ದಾನೆಂದು ಭಾವಿಸತಕ್ಕದ್ದು.

**25. ಸರ್ಕಾರದಿಂದ ವಿನಾಯಿತಿ ಪಡೆದ ಕಂಪನಿ ಅಥವಾ ನಿಗಮಿತವಲ್ಲದ ನಿಕಾಯವು ನೀಡಿದ ಸಾಲಗಳಿಗೆ ಕೆಲವು ಪ್ರಕರಣಗಳ ಉಪಬಂಧಗಳು ಅನ್ವಯಿಸದಿರುವುದು.-** 20 ರಿಂದ 24ನೇ ಪ್ರಕರಣಗಳಲ್ಲಿರುವವು ಯಾವುವೂ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಆ ಪ್ರಕರಣಗಳ ಪ್ರವರ್ತನೆಯಿಂದ ವಿನಾಯಿತಿಗೊಳಿಸಬಹುದಾದ ಕಂಪನಿಗಳ ಅಥವಾ ನಿಗಮಿತವಲ್ಲದ ನಿಕಾಯಗಳ ಯಾವುದೇ ವರ್ಗದ ನೀಡಿದ ಸಾಲಗಳಿಗೆ ಅನ್ವಯವಾಗತಕ್ಕದ್ದಲ್ಲ.

**26. ಕೆಲವು ಪ್ರಕರಣಗಳಲ್ಲಿ ವಸೂಲಿಯಾಗಬೇಕಾದ ಬಡ್ಡಿಯನ್ನು ಮಿತಗೊಳಿಸಲು ನ್ಯಾಯಾಲಯದ ಅಧಿಕಾರ.-** ಯಾವುದೇ ಒಪ್ಪಂದ ಪತ್ರದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ನ್ಯಾಯಾಲಯವು, ಈ ಅಧಿನಿಯಮವು ಜಾರಿಗೆ ಬಂದ ದಿನಾಂಕಕ್ಕೆ ಮುಂಚೆ ಅಥವಾ ತರುವಾಯ ನೀಡಿರಲಿ ಆ ಯಾವುದೇ ಸಾಲದ ಸಂಬಂಧದಲ್ಲಿ ಡಿಕ್ರಿಯ ದಿನಾಂಕದಂದು ಬಾಕಿ ಇದ್ದ ಸಾಲದ ಅಸಲಿಗಿಂತ ಹೆಚ್ಚಿನ ಮೊಬಲಗನ್ನು ಬಡ್ಡಿಗಾಗಿ ಡಿಕ್ರಿಮಾಡತಕ್ಕದ್ದಲ್ಲ.

**27. ಡಿಕ್ರಿ ಮೊಬಲಗನ್ನು ಕಂತುಗಳಲ್ಲಿ ಸಂದಾಯ ಮಾಡುವಂತೆ ನಿರ್ದೇಶಿಸಲು ನ್ಯಾಯಾಲಯದ ಅಧಿಕಾರ.-** ನ್ಯಾಯಾಲಯವು, ಯಾವುದೇ ಕಾಲದಲ್ಲಿ, ತೀರ್ಪು ಸಾಲಗಾರನ ಅರ್ಜಿಯ ಮೇಲೆ, ಡಿಕ್ರಿಧಾರಕನಿಗೆ ನೋಟೀಸ್ ನೀಡಿದ ತರುವಾಯ, ಈ ಅಧಿನಿಯಮವು ಜಾರಿಗೆ ಬಂದ ದಿನಾಂಕಕ್ಕೆ ಮುಂಚೆಯಾಗಲಿ ಅಥವಾ ತರುವಾಯವಾಗಲಿ, ಸಾಲಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧ ಜಾರಿ ಮಾಡಿದ ಯಾವುದೇ ಡಿಕ್ರಿಯ ಮೊತ್ತವನ್ನು, ತೀರ್ಪು ಸಾಲಗಾರನ ಸ್ಥಿತಿಗತಿಗಳನ್ನು ಗಣನೆಗೆ ತೆಗೆದುಕೊಂಡು ತಾನು ಸೂಕ್ತವೆಂದು ಪರಿಗಣಿಸಬಹುದಾದಂತೆ ಅಂಥ ಸಂಖ್ಯೆಯ ಕಂತುಗಳಲ್ಲಿ ಮತ್ತು ಅಂಥ ದಿನಾಂಕಗಳಂದು ಮತ್ತು ಅಂಥ ಷರತ್ತುಗಳಿಗೊಳಪಟ್ಟು ಸಂದಾಯ ಮಾಡತಕ್ಕದ್ದೆಂದು ನಿರ್ದೇಶಿಸಬಹುದು.

**28. ಬಡ್ಡಿಯ ದರಗಳ ಮೇಲೆ ಪರಿಮಿತಿ.-** (1) ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ಭದ್ರತೆ ಸಹಿತ ಹಾಗೂ ಭದ್ರತೆ ರಹಿತ ಸಾಲಗಳಿಗೆ ಸಂಬಂಧಿಸಿದಂತೆ, ಯಾವುದೇ ಸ್ಥಳೀಯ ಪ್ರದೇಶ ಅಥವಾ ಲೇವಾದೇವಿ ವ್ಯವಹಾರದ ವರ್ಗಕ್ಕೆ ಬಡ್ಡಿಯ ಗರಿಷ್ಠ ದರಗಳನ್ನು ನಿಗದಿಪಡಿಸಬಹುದು.

(2) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, (1)ನೇ ಉಪ ಪ್ರಕರಣದ ಅಡಿಯಲ್ಲಿ, ರಾಜ್ಯ ಸರ್ಕಾರವು ನಿಗದಿಪಡಿಸಿದ ಗರಿಷ್ಠ ದರವನ್ನು ಮೀರಿದ ಒಂದು ದರದಲ್ಲಿ ಬಡ್ಡಿಯನ್ನು ಸಂದಾಯ ಮಾಡಲು ಲೇವಾದೇವಿದಾರನ ಮತ್ತು ಸಾಲ ಪಡೆದವನ ನಡುವಣ ಯಾವುದೇ ಒಪ್ಪಂದವು ಮಾನ್ಯವಾಗತಕ್ಕದ್ದಲ್ಲ ಮತ್ತು ಯಾವುದೇ ನ್ಯಾಯಾಲಯವು, ಈ ಅಧಿನಿಯಮವು ಅನ್ವಯಿಸುವ ಯಾವುದೇ ದಾವೆಯಲ್ಲಿ ಸದರಿ ದರಗಳನ್ನು ಮೀರಿದ ಬಡ್ಡಿಯನ್ನು ವಿಧಿಸತಕ್ಕದ್ದಲ್ಲ.

(3) ಯಾರೇ ಲೇವಾದೇವಿದಾರನು, (1)ನೇ ಉಪ ಪ್ರಕರಣದ ಅಡಿಯಲ್ಲಿ, ರಾಜ್ಯ ಸರ್ಕಾರವು ನಿಗದಿಪಡಿಸಿದ ಗರಿಷ್ಠ ದರವನ್ನು ಮೀರಿದ ಒಂದು ದರದಲ್ಲಿ ಬಡ್ಡಿಯನ್ನು ಒಬ್ಬ ಸಾಲಗಾರನಿಗೆ ವಿಧಿಸಿದರೆ ಅಥವಾ ಅವನಿಂದ ಸ್ವೀಕರಿಸಿದರೆ, ಅವನು 39ನೇ ಪ್ರಕರಣದ ಉದ್ದೇಶಗಳಿಗೆ ಸಂಬಂಧಿಸಿದಂತೆ ಈ ಅಧಿನಿಯಮವನ್ನು ಉಲ್ಲಂಘಿಸಿದ್ದಾನೆಂದು ಭಾವಿಸತಕ್ಕದ್ದು.

**29. ಲೇವಾದೇವಿದಾರನು ಸಾಲಗಳ ಮೇಲೆ ವೆಚ್ಚಗಳನ್ನು ವಿಧಿಸುವುದಕ್ಕೆ ನಿಷೇಧ.-** ಯಾರೇ ಲೇವಾದೇವಿದಾರನು, ಭದ್ರತೆಯಾಗಿ ಅಥವಾ ಅಡಮಾನದ ರೂಪದಲ್ಲಿ ಸ್ವತ್ತನ್ನು ನೀಡಬೇಕಾಗಿರುವಾಗ ಮತ್ತು ಎರಡೂ ಪಕ್ಷಕಾರರು ಅಂಥ ವೆಚ್ಚಗಳ ಬಗ್ಗೆ ಮತ್ತು ಅವುಗಳನ್ನು ತುಂಬಿಕೊಡುವುದನ್ನು ಒಪ್ಪಿಕೊಂಡಿರುವಲ್ಲಿ ಅಥವಾ ಅಂಥ ವೆಚ್ಚಗಳು, ಚಾರ್ಜುಗಳು ಅಥವಾ ಖರ್ಚುಗಳನ್ನು ಸ್ವತ್ತು ವರ್ಗಾವಣೆ ಅಧಿನಿಯಮ, 1882ರ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳ ಅಡಿಯಲ್ಲಿ ವಿಧಿಸಬಹುದಾಗಿರುವಲ್ಲಿ, ಸಾಲಗಾರನಿಂದ ಅಥವಾ ಉದ್ದೇಶಿತ ಸಾಲಗಾರನಿಂದ ಸ್ವತ್ತಿನ ಹಕ್ಕು ಪತ್ರವನ್ನು ಪರೀಕ್ಷಿಸಲು, ಸ್ಟಾಂಪು ವೆಚ್ಚವನ್ನು ಭರಿಸಲು ಮತ್ತು ದಸ್ತಾವೇಜುಗಳನ್ನು ನೋಂದಾಯಿಸಲು ಮತ್ತು ಇತರ ನಗದು ಖರ್ಚು ವೆಚ್ಚ ಗಳಂಥ ಯುಕ್ತ ವೆಚ್ಚಗಳನ್ನಲ್ಲದೆ ಇತರ ಯಾವುದೇ ಮೊತ್ತವನ್ನು ಸ್ವೀಕರಿಸತಕ್ಕದ್ದಲ್ಲ.

**30. ಸಾಲ ಹಸ್ತಾಂತರಣದ ತರುವಾಯ ನೀಡಬೇಕಾದ ನೋಟೀಸು ಮತ್ತು ಮಾಹಿತಿ.-** (1) ಈ ಅಧಿನಿಯಮವು ಜಾರಿಗೆ ಬರುವ ದಿನಾಂಕಕ್ಕೆ ಮೊದಲಾಗಲಿ ಅಥವಾ ತರುವಾಯವಾಗಲಿ ನೀಡಲಾದ ಒಂದು ಸಾಲವನ್ನು ಅಥವಾ ಅಂಥ ಸಾಲದ ಮೇಲಿನ ಯಾವುದೇ ಬಡ್ಡಿಯನ್ನು ಅಥವಾ ಅಂಥ ಸಾಲದ ಅಥವಾ ಬಡ್ಡಿಯ ಸಂಬಂಧದಲ್ಲಿ ಮಾಡಲಾಗಿರುವ ಯಾವುದೇ ಒಪ್ಪಂದದ ಪ್ರಯೋಜನವನ್ನು ಅಥವಾ ತೆಗೆದುಕೊಂಡಿರುವ ಭದ್ರತೆಯನ್ನು ಯಾರೇ ಹಸ್ತಾಂತರ ಪಡೆದವನಿಗೆ ಹಸ್ತಾಂತರಿಸಿದ್ದಲ್ಲಿ, ಹಸ್ತಾಂತರಕಾರನು (ಅವನು ಹಣವನ್ನು ಸಾಲವಾಗಿ ನೀಡಿದ ಲೇವಾದೇವಿದಾರನಾಗಿರಲಿ ಅಥವಾ ಸಾಲವನ್ನು ಈ ಹಿಂದೆ ಯಾರಿಗೆ ಹಸ್ತಾಂತರಿಸಲಾಗಿತ್ತೋ ಆ ಯಾರೇ ವ್ಯಕ್ತಿಯಾಗಿರಲಿ) ಹಸ್ತಾಂತರ ಮಾಡುವ ಮೊದಲು,-

(ಎ) ಸಾಲ, ಬಡ್ಡಿ, ಒಪ್ಪಂದ ಅಥವಾ ಭದ್ರತೆಯ ಮೇಲೆ, ಈ ಅಧಿನಿಯಮದ ಜಾರಿಯು ಪರಿಣಾಮ ಬೀರುವ ಬಗ್ಗೆ, ಹಸ್ತಾಂತರ ಪಡೆದವನಿಗೆ ಲಿಖಿತ ನೋಟೀಸನ್ನು ನೀಡತಕ್ಕದ್ದು;

(ಬಿ) ಈ ಅಧಿನಿಯಮದ ಉಪಬಂಧಗಳನ್ನು ಪಾಲಿಸಲು, ಹಸ್ತಾಂತರ ಪಡೆದವನಿಗೆ ಅನುಕೂಲವಾಗುವಂತೆ ಮಾಡಲು ಅವಶ್ಯವಿರುವ ಎಲ್ಲ ಮಾಹಿತಿಯನ್ನು ಅವನಿಗೆ ನೀಡತಕ್ಕದ್ದು; ಮತ್ತು

(ಸಿ) ಹಸ್ತಾಂತರ ಪಡೆದವನ ಹೆಸರು ಮತ್ತು ವಿಳಾಸವನ್ನು ಒದಗಿಸಿ, ಹಸ್ತಾಂತರದ ಬಗ್ಗೆ ಲಿಖಿತ ನೋಟೀಸನ್ನು ಸಾಲಗಾರನಿಗೆ ನೀಡತಕ್ಕದ್ದು.

(2) (1) ನೇ ಉಪ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು, ಅದರಿಂದ ಪ್ರತಿಕೂಲ ಪ್ರಭಾವ ಹೊಂದುವ ಯಾರೇ ಇತರ ವ್ಯಕ್ತಿಗೆ ನಷ್ಟ ಭರ್ತಿ ಮಾಡಿಕೊಡಲು ಬದ್ಧನಾಗಿರತಕ್ಕದ್ದು.

**31. ಹಸ್ತಾಂತರ ಪಡೆದವರ ಸಂಬಂಧದಲ್ಲಿ ಅಧಿನಿಯಮದ ಅನ್ವಯ.-** (1) ಇದರಲ್ಲಿ ಇನ್ನು ಮುಂದೆ ಉಪಬಂಧಿಸಿರುವುದನ್ನುಳಿದು, ಈ ಅಧಿನಿಯಮವು ಜಾರಿಗೆ ಬರುವ ದಿನಾಂಕಕ್ಕೆ ಮೊದಲಾಗಲಿ ಅಥವಾ ತರುವಾಯವಾಗಲೀ ಒಬ್ಬ ಲೇವಾದೇವಿದಾರನು ನೀಡಿದ ಸಾಲದ ಹಣಕ್ಕೆ ಸಂಬಂಧಿಸಿದಂತೆ ಅವನಿಗೆ ಬಾಕಿಯಿರುವ ಯಾವುದೇ ಸಾಲ ಅಥವಾ ಹಾಗೆ ಸಾಲ ನೀಡಿದ ಹಣದ ಮೇಲಣ ಬಡ್ಡಿ ಅಥವಾ ಮಾಡಿಕೊಂಡ ಯಾವುದೇ ಒಪ್ಪಂದದ ಅಥವಾ ಯಾವುದೇ ಅಂಥ ಸಾಲದ ಅಥವಾ ಬಡ್ಡಿಯ ಸಂಬಂಧದಲ್ಲಿ ತೆಗೆದುಕೊಂಡ ಭದ್ರತೆಯ ಪ್ರಯೋಜನವನ್ನು ಹಸ್ತಾಂತರಿಸಿದಲ್ಲಿ, ಹಸ್ತಾಂತರ ಪಡೆದವನನ್ನು ಲೇವಾದೇವಿದಾರನೆಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಎಲ್ಲ ಉಪಬಂಧಗಳು ಅಂಥ ಹಸ್ತಾಂತರ ಪಡೆದವನು ಅವನು ಲೇವಾದೇವಿದಾರನಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

(2) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಕಾರಣಕ್ಕಾಗಿ, ಅಂಥ ಯಾವುದೇ ಹಸ್ತಾಂತರಣವು ಅಮಾನ್ಯವಾದಲ್ಲಿ ಮತ್ತು ಹಾಗೆ ಹಸ್ತಾಂತರಿಸಿದ ಯಾವುದೇ ಸಾಲದ ಸಂಬಂಧವಾಗಿ ಸಾಲಗಾರನು ಯಾವುದೇ ಹಣ ಸಂದಾಯ ಮಾಡಿದ್ದಲ್ಲಿ ಅಥವಾ ಸ್ವತ್ತನ್ನು ವರ್ಗಾವಣೆ ಮಾಡಿದ್ದಲ್ಲಿ, ಹಸ್ತಾಂತರ ಪಡೆದವನನ್ನು ಅಂಥ ಸಂದಾಯದ ಅಥವಾ ವರ್ಗಾವಣೆಯ ಸಂಬಂಧದಲ್ಲಿ ಈ ಅಧಿನಿಯಮದ ಎಲ್ಲ ಉದ್ದೇಶಗಳಿಗಾಗಿ ಲೇವಾದೇವಿದಾರನ ಏಜೆಂಟನೆಂದು ಭಾವಿಸತಕ್ಕದ್ದು.

**32. ವ್ಯವಹಾರಗಳ ಪುನರಾರಂಭ:-** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ನ್ಯಾಯಾಲಯವು, ಈ ಅಧಿನಿಯಮವು ಅನ್ವಯವಾಗುವ ಏಕಪಕ್ಷೀಯವಾಗಿ ಅಥವಾ ಅನ್ಯಥಾ ವಿಚಾರಣೆ ನಡೆಸಿದ ಯಾವುದೇ ದಾವೆಯಲ್ಲಿ,-

(ಎ) ಯಾವುದೇ ವ್ಯವಹಾರವನ್ನು ಅಥವಾ ಪಕ್ಷಕಾರರ ನಡುವೆ ಈಗಾಗಲೇ ನಡೆದಿರುವ ಯಾವುದೇ ಲೆಕ್ಕಪತ್ರವನ್ನು ಪುನರಾರಂಭಿಸತಕ್ಕದ್ದು;

(ಬಿ) ಪಕ್ಷಕಾರರ ನಡುವೆ ಇರುವ ಲೆಕ್ಕವನ್ನು ತೆಗೆದುಕೊಳ್ಳತಕ್ಕದ್ದು;

(ಸಿ) ಯಾವುದೇ ಹೆಚ್ಚುವರಿ ಬಡ್ಡಿಗೆ ಸಂಬಂಧಿಸಿದಂತೆ ಸಾಲಗಾರನಿಗೆ ವಿಧಿಸಿದ ಮೊತ್ತವನ್ನು ಕಡಿಮೆ ಮಾಡತಕ್ಕದ್ದು;

(ಡಿ) ಲೆಕ್ಕಗಳನ್ನು ತೆಗೆದುಕೊಂಡ ಮೇಲೆ, ಲೇವಾದೇವಿದಾರನು ತನಗೆ ಬರಬೇಕಾಗಿದ್ದ ಬಾಕಿಗಿಂತ ಹೆಚ್ಚು ಹಣವನ್ನು ಪಡೆದಿದ್ದಾನೆಂದು ಕಂಡು ಬಂದರೆ, ಅಂಥ ಹಣಕ್ಕೆ ಸಂಬಂಧಿಸಿದಂತೆ ಸಾಲಗಾರನ ಪರವಾಗಿ ಒಂದು ಡಿಕ್ರಿಯನ್ನು ಹೊರಡಿಸತಕ್ಕದ್ದು:

ಪರಂತು, ಈ ಅಧಿಕಾರಗಳನ್ನು ಚಲಾಯಿಸುವಲ್ಲಿ, ನ್ಯಾಯಾಲಯವು,-

(i) ಪಕ್ಷಕಾರರ ನಡುವೆ ಅಥವಾ ದಾವೆಯ ದಿನಾಂಕದಿಂದ ಆರು ವರ್ಷಗಳಿಗೂ ಮೀರಿದ ದಿನಾಂಕದಂದು ಯಾರ ಮೂಲಕ ಅವರು ಕ್ಲೇಮು ಮಾಡುವರೋ ಆ ಯಾರೇ ವ್ಯಕ್ತಿಯ ನಡುವೆ ಉಂಟಾದ, ಹಿಂದಿನ ವ್ಯವಹರಣೆಗಳನ್ನು ಮುಕ್ತಾಯಗೊಳಿಸಿರುವುದೆಂದು ಮತ್ತು ಹೊಸ ಹೊಣೆಗಾರಿಕೆಗಳನ್ನು ಸೃಜಿಸುವುದೆಂದು ತಾತ್ಪರ್ಯವಾಗುವ ಯಾವುದೇ ಹೊಂದಾಣಿಕೆಯನ್ನು ಅಥವಾ ಒಪ್ಪಂದವನ್ನು ಪುನರಾರಂಭಿಸತಕ್ಕದ್ದಲ್ಲ;

(ii) ನ್ಯಾಯಾಲಯದ ಯಾವುದೇ ಡಿಕ್ರಿಗೆ ಬಾಧಕವಾಗುವಂಥ ಯಾವುದೇ ಕೃತ್ಯವನ್ನು ಮಾಡತಕ್ಕದ್ದಲ್ಲ.

**ವಿವರಣೆ.-** ಈ ಪ್ರಕರಣದ ಉದ್ದೇಶಕ್ಕಾಗಿ " ಹೆಚ್ಚಿನ ಬಡ್ಡಿ " ಎಂದರೆ, 28ನೇ ಪ್ರಕರಣದ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿ ವಿಧಿಸಿದ ಬಡ್ಡಿ.

**33. ಲೆಕ್ಕಗಳನ್ನು ತೆಗೆದುಕೊಂಡು ಮೊತ್ತ ಬಾಕಿ ಇರುವುದಾಗಿ ಘೋಷಿಸುವ ಬಗ್ಗೆ ವಿಚಾರಣೆ.-** (1) ಯಾರೇ ಸಾಲಗಾರನು, ಸಾಲ ಸಂದಾಯದ ಅವಧಿ ಮುಕ್ತಾಯವಾಗಿರಲಿ ಅಥವಾ ಇಲ್ಲದಿರಲಿ ಯಾವುದೇ ಕಾಲದಲ್ಲಿ, ಲೆಕ್ಕವನ್ನು ತೆಗೆದುಕೊಳ್ಳಬೇಕೆಂದು ಲೇವಾದೇವಿದಾರನಿಗೆ ಹಣ ಬಾಕಿ ಇದೆಯೆಂದು ಘೋಷಿಸಬೇಕೆಂದು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು. ಅಂಥ ಅರ್ಜಿಯು, ನಿಯಮಿಸಲಾದ ನಮೂನೆಯಲ್ಲಿರತಕ್ಕದ್ದು ಮತ್ತು ನಿಯಮಿಸಲಾದ ಫೀಜಿನೊಂದಿಗೆ ಇರತಕ್ಕದ್ದು.

(2) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ನ್ಯಾಯಾಲಯವು, ಲೇವಾದೇವಿದಾರನಿಗೆ ಅರ್ಜಿಯ ಬಗ್ಗೆ ಒಂದು ನೋಟೀಸನ್ನು ನೀಡುವಂತೆ ಮಾಡತಕ್ಕದ್ದು.

(3) ಅರ್ಜಿಯ ವಿಚಾರಣೆಗಾಗಿ ನಿಗದಿಪಡಿಸಲಾದ ದಿನಾಂಕದಂದು ಅಥವಾ ಕಾಲಕಾಲಕ್ಕೆ ವಿಚಾರಣೆಯನ್ನು ಮುಂದೂಡಬಹುದಾದಂಥ ದಿನಾಂಕದಂದು ನ್ಯಾಯಾಲಯವು ಒಂದು ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ಪಕ್ಷಕಾರರ ನಡುವಣ ವ್ಯವಹಾರಗಳ ಬಗ್ಗೆ ಪರಿಗಣಿಸಿದ ಮೇಲೆ, ಸಾಲಗಾರನು ಲೇವಾದೇವಿದಾರನಿಗೆ ಅಸಲು ಮತ್ತು ಬಡ್ಡಿಗೆ ಸಂಬಂಧಿಸಿದಂತೆ, ಸಂದಾಯ ಮಾಡಬೇಕಾದ ಮೊತ್ತ ಇನ್ನೂ ಯಾವುದಾದರೂ ಇದ್ದರೆ, ಅದನ್ನು ಘೋಷಿಸಿ ಒಂದು ಆದೇಶವನ್ನು ಹೊರಡಿಸತಕ್ಕದ್ದು. ಈ ಪ್ರಕರಣದ ಅಡಿಯಲ್ಲಿ ಲೆಕ್ಕಗಳನ್ನು ತೆಗೆದುಕೊಳ್ಳುವಾಗ ನ್ಯಾಯಾಲಯವು, 20 ರಿಂದ 32ರ ವರೆಗಿನ ಪ್ರಕರಣಗಳು ಮತ್ತು 35ನೇ ಪ್ರಕರಣದ ಉಪಬಂಧಗಳನ್ನು ಅನುಸರಿಸತಕ್ಕದ್ದು.

**34. ಲೇವಾದೇವಿದಾರನಿಗೆ ಬಾಕಿ ಇರುವ ಹಣವನ್ನು ನ್ಯಾಯಾಲಯದಲ್ಲಿ ಠೇವಣಿ ಇಡುವುದು.-** (1) ಸಾಲಗಾರನು ಯಾವುದೇ ಕಾಲದಲ್ಲಿ ತನ್ನಿಂದ ಲೇವಾದೇವಿದಾರನಿಗೆ ಬಾಕಿ ಇರುವ ಯಾವುದೇ ಹಣದ ಮೊತ್ತವನ್ನು ಅಸಲು, ಬಡ್ಡಿ ಅಥವಾ ಅವೆರಡೂ ಸೇರಿದ ಒಂದು ಸಾಲದ ಸಂಬಂಧವಾಗಿ ನೀಡಬಹುದು.

(2) ಲೇವಾದೇವಿದಾರನು, ಹಾಗೆ ನೀಡಲಾದ ಯಾವುದೇ ಹಣವನ್ನು ಅಂಗೀಕರಿಸಲು ನಿರಾಕರಿಸಿದರೆ, ಸಾಲಗಾರನು, ಸದರಿ ಮೊತ್ತವನ್ನು ನ್ಯಾಯಾಲಯದಲ್ಲಿ ಲೇವಾದೇವಿದಾರನ ಖಾತೆಯಲ್ಲಿ ಠೇವಣಿ ಇಡಬಹುದು.

(3) ಆ ತರುವಾಯ ನ್ಯಾಯಾಲಯವು, ಠೇವಣಿಯ ಬಗ್ಗೆ ಲೇವಾ ದೇವಿದಾರನಿಗೆ ಲಿಖಿತ ನೋಟೀಸು ನೀಡತಕ್ಕದ್ದು ಮತ್ತು ಅವನು ಸಾಲದ ಸಂಬಂಧದಲ್ಲಿ ಆಗ ಬಾಕಿ ಇರುವ ಮೊತ್ತವನ್ನು ತಿಳಿಸಿ ಅರ್ಜಿ ಸಲ್ಲಿಸಿದ ಮೇಲೆ ಮತ್ತು ಸದರಿ ಮೊತ್ತವನ್ನು ಅಂಗೀಕರಿಸುವ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದ ಮೇಲೆ ಅದನ್ನು ಸ್ವೀಕರಿಸಿ, ಮೊದಲು ಬಡ್ಡಿಗಾಗಿ ಮತ್ತು ಯಾವುದೇ ಮೊತ್ತ ಉಳಿದರೆ, ಅದನ್ನು ಅಸಲಿಗಾಗಿ ಜಮೆ ತೆಗೆದುಕೊಳ್ಳತಕ್ಕದ್ದು.

(4) ಲೇವಾದೇವಿದಾರನು ಆ ಮೊತ್ತವನ್ನು ಅಂಗೀಕರಿಸದಿದ್ದರೆ, ನ್ಯಾಯಾಲಯವು, ಸದರಿ ಮೊತ್ತವನ್ನು ಮೊದಲು ಬಡ್ಡಿಯ ಲೆಕ್ಕಕ್ಕೆ ಮತ್ತು ಯಾವುದೇ ಮೊತ್ತ ಉಳಿದರೆ, ಅದನ್ನು ಅಸಲಿಗಾಗಿ ಜಮೆ ಮಾಡತಕ್ಕದ್ದು.

**35. ಇಡೀ ತಿಂಗಳಿಗೆ ಬಡ್ಡಿಯನ್ನು ಸಂದಾಯ ಮಾಡಬೇಕಾದ ಸಂದರ್ಭ:-** ಪಕ್ಷಕಾರರ ನಡುವಣ ಯಾವುದೇ ಒಪ್ಪಂದದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ ಏನೇ ಇದ್ದರೂ, 21ನೇ ಪ್ರಕರಣದ ಅಡಿಯಲ್ಲಿ ಸಾಲಗಾರನಿಗೆ ಒಂದು ವಿವರಣಪಟ್ಟಿಯನ್ನು ನೀಡಿದಾಗ ಅಥವಾ ಪಾಸ್ ಬುಕ್ಕನ್ನು ಒದಗಿಸಿದಾಗ ಅಥವಾ 33ನೇ ಪ್ರಕರಣದ ಅಡಿಯಲ್ಲಿ

ಲೆಕ್ಕಗಳನ್ನು ತೆಗೆದುಕೊಂಡಾಗ ಅಥವಾ ಒಂದು ಕ್ಯಾಲೆಂಡರ್ ತಿಂಗಳಿನ ಹದಿನಾರನೇ ದಿನಾಂಕಕ್ಕೆ ಮುಂಚೆ 34ನೇ ಪ್ರಕರಣದ ಅಡಿಯಲ್ಲಿ ಸಾಲದ ಸಂಬಂಧವಾಗಿ ಸಾಲಗಾರನು ಲೇವಾದೇವಿದಾರನಿಗೆ ಒಂದು ಟೆಂಡರನ್ನು ಸಲ್ಲಿಸಿದಾಗ, ಬಾಕಿ ಇರುವ ಬಡ್ಡಿಯನ್ನು ಸದರಿ ತಿಂಗಳ ಹದಿನೈದು ದಿನಗಳಿಗೆ ಸಂದಾಯವಾಗುವಂತೆ ಲೆಕ್ಕ ಹಾಕತಕ್ಕದ್ದು ಮತ್ತು ತರುವಾಯದ ದಿನದಂದು ವಿವರಣ ಪಟ್ಟಿಯನ್ನು ನೀಡಿದರೆ ಅಥವಾ ಪಾಸ್ ಬುಕ್ಕನ್ನು ಒದಗಿಸಿದರೆ ಅಥವಾ ಲೆಕ್ಕಗಳನ್ನು ತೆಗೆದುಕೊಂಡರೆ ಅಥವಾ ಟೆಂಡರನ್ನು ಸಲ್ಲಿಸಿದರೆ, ಆಗ, ಅಂಥ ಯಾವುದೇ ದಿನಾಂಕದಂದು ಅಂಥ ವಿವರಣ ಪಟ್ಟಿಯನ್ನು ನೀಡಲಾಗಿರುವ ಅಥವಾ ಪಾಸ್ ಬುಕ್ಕನ್ನು ಒದಗಿಸಲಾಗಿರುವ ಅಥವಾ ಅಂಥ ಲೆಕ್ಕವನ್ನು ತೆಗೆದುಕೊಳ್ಳಲಾಗಿರುವ ಅಥವಾ ಅಂಥ ಟೆಂಡರನ್ನು ಸಲ್ಲಿಸಲಾಗಿರುವ ವಿಷಯವನ್ನು ಗಣನೆಗೆ ತೆಗೆದುಕೊಳ್ಳದೆ ಇಡೀ ಕ್ಯಾಲೆಂಡರ್ ತಿಂಗಳಿಗೆ ಲೆಕ್ಕ ಹಾಕತಕ್ಕದ್ದು.

**36. ಲೇವಾದೇವಿದಾರರು ತಮ್ಮ ಹೆಸರುಗಳನ್ನು ಅಂಗಡಿಗಳ ಮುಂದೆ ಪ್ರದರ್ಶಿಸುವುದು.-** ಪ್ರತಿಯೊಬ್ಬ ಲೇವಾದೇವಿದಾರನು, ತನ್ನ ಅಂಗಡಿ ಅಥವಾ ವ್ಯವಹಾರದ ಸ್ಥಳದ ಮುಂದೆ ' ಲೇವಾದೇವಿದಾರ ' ಎಂಬ ಪದವನ್ನು ತನ್ನ ಹೆಸರಿನೊಂದಿಗೆ ಯಾವಾಗಲೂ ಪ್ರದರ್ಶಿಸತಕ್ಕದ್ದು.

**37. ಬಂಧಪತ್ರ, ಮುಂತಾದವುಗಳಲ್ಲಿ ತಪ್ಪು ಮೊತ್ತವನ್ನು ನಮೂದಿಸುವುದು ಒಂದು ಅಪರಾಧ.-** (1) ಯಾರೇ ಲೇವಾದೇವಿದಾರನು, ಸಾಲದ ವಾಸ್ತವಿಕ ಮೊತ್ತವನ್ನು ತಿಳಿಸದಿರುವ ಅಥವಾ ಅಂಥ ಮೊತ್ತವನ್ನು ತಪ್ಪಾಗಿ ತಿಳಿಸುವ ಯಾವುದೇ ಪ್ರಾಮಿಸರಿ ನೋಟ್, ಸ್ವೀಕೃತಿ ಪತ್ರ, ಬಂಧಪತ್ರ ಅಥವಾ ಇತರ ಬರವಣಿಗೆಯನ್ನು ಪಡೆಯತಕ್ಕದ್ದಲ್ಲ ಅಥವಾ ಬರೆದುಕೊಟ್ಟ ತರುವಾಯ ಭರ್ತಿ ಮಾಡಬೇಕಾದ ಸ್ಥಳವನ್ನು ಖಾಲಿ ಬಿಟ್ಟಿರುವ ಯಾವುದೇ ಲಿಖಿತಗಳನ್ನು ಬರೆದುಕೊಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ಆಗಲಿ, ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಅಥವಾ ಇವೆರಡರಿಂದಲೂ ದಂಡಿತರಾಗತಕ್ಕದ್ದು.

**38. ಉಪದ್ರವಕ್ಕಾಗಿ ದಂಡ.-** ಸಾಲ ನೀಡಿದವನು ಬಾಕಿಯಿರುವ ಸಾಲದ ವಸೂಲಿಗಾಗಿ ಸಾಲಗಾರನಿಗೆ ಉಪದ್ರವ ಕೊಡುವ ಅಥವಾ ಅದಕ್ಕೆ ಪ್ರೇರೇಪಿಸುವ ಯಾರೇ ಆದರೂ, ಅಪರಾಧ ನಿರ್ಣಯವಾದ ಮೇಲೆ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ [1][ಐದು ಸಾವಿರ][1] ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಅಥವಾ ಇವೆರಡರಿಂದಲೂ ದಂಡಿತರಾಗತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ವಿವರಣೆ.-** ಈ ಪ್ರಕರಣದ ಉದ್ದೇಶಗಳಿಗಾಗಿ, ಮತ್ತೊಬ್ಬ ವ್ಯಕ್ತಿಯು ಮಾಡಲು ಹಕ್ಕು ಹೊಂದಿರುವ ಯಾವುದೇ ಕೃತ್ಯವನ್ನು ಮಾಡುವುದಕ್ಕೆ ತಡೆಯೊಡ್ಡುವ ಅಥವಾ ತಡೆಯೊಡ್ಡಲು ಹಕ್ಕು ಹೊಂದಿರುವ ಯಾವುದೇ ಕೃತ್ಯವನ್ನು ಎಸಗುವಂತೆ ಮಾಡುವ ಉದ್ದೇಶದಿಂದ,-

(ಎ) ಅಂಥ ಇತರ ವ್ಯಕ್ತಿಗೆ ಅಡ್ಡಿಯುಂಟು ಮಾಡುವ, ಹಿಂಸಾಚಾರಕ್ಕೆ ಇಳಿಯುವ ಅಥವಾ ಬೆದರಿಸುವ;

(ಬಿ) ಅಂಥ ಇತರ ವ್ಯಕ್ತಿಯನ್ನು ಸ್ಥಳದಿಂದ ಸ್ಥಳಕ್ಕೆ ಎಡೆಬಿಡದೇ ಹಿಂಬಾಲಿಸುವ ಅಥವಾ ಅವನ ಸ್ವಾಧೀನದಲ್ಲಿರುವ ಅಥವಾ ಉಪಯೋಗದಲ್ಲಿರುವ ಯಾವುದೇ ಸ್ವತ್ತಿನಲ್ಲಿ ಹಸ್ತಕ್ಷೇಪ ಮಾಡಿದರೆ ಅಥವಾ ಯಾವುದೇ ಅಂಥ ಸ್ವತ್ತನ್ನು ಅಪಹರಿಸುವ ಅಥವಾ ಅದಕ್ಕೆ ಆತಂಕ ವ್ಯಕ್ತಪಡಿಸುವ; ಅಥವಾ

(ಸಿ) ಅಂಥ ಇತರ ವ್ಯಕ್ತಿಯು ವಾಸಿಸುವ ಅಥವಾ ಕೆಲಸ ಮಾಡುವ ಅಥವಾ ವ್ಯವಹಾರ ನಡೆಸುವ ಅಥವಾ ಮನೆಯಲ್ಲಿ ಅಥವಾ ಇತರ ಸ್ಥಳದಲ್ಲಿ ಅಥವಾ ಅವುಗಳ ಹತ್ತಿರ ಸುಳಿದಾಡುವ; ಅಥವಾ

(ಡಿ) ಅಂಥ ಇತರ ವ್ಯಕ್ತಿಗೆ ಅಥವಾ ಅವನ ಕುಟುಂಬದ ಸದಸ್ಯರಿಗೆ ಕಿರುಕುಳ ಉಂಟಾಗುವ ಅಥವಾ ಬೆದರಿಸುವ ರೀತಿಯಲ್ಲಿ ಯಾವುದೇ ಕೃತ್ಯವನ್ನು ಮಾಡುವ ; ಅಥವಾ

(ಇ) ಅಂಥ ಇತರ ವ್ಯಕ್ತಿಗೆ ಗಾಬರಿಯುಂಟು ಮಾಡುವ ಅಥವಾ ಸ್ವತ್ತಿಗೆ ಅಪಾಯವನ್ನುಂಟು ಮಾಡುವ ರೀತಿಯಲ್ಲಿ ತಿರುಗಾಡುವ ಅಥವಾ ವರ್ತಿಸುವ

- ಅಂಥ ವ್ಯಕ್ತಿಯು ಇತರ ವ್ಯಕ್ತಿಗೆ ಪೀಡನೆ ಉಂಟು ಮಾಡುವವನೆಂದು ಭಾವಿಸತಕ್ಕದ್ದು:

ಪರಂತು, ಕೇವಲ ಮಾಹಿತಿಯನ್ನು ಪಡೆಯುವುದಕ್ಕಾಗಿ ಅಥವಾ ತಿಳಿಸುವುದಕ್ಕಾಗಿ (ಸಿ) ಖಂಡದಲ್ಲಿ ಉಲ್ಲೇಖಿಸಿದ ಮನೆಗೆ ಅಥವಾ ಸ್ಥಳಕ್ಕೆ ಹೋಗುವ ವ್ಯಕ್ತಿಯು ಪೀಡನೆ ಉಂಟುಮಾಡುವವನೆಂದು ಭಾವಿಸತಕ್ಕದ್ದಲ್ಲ.

**39. ದಂಡಗಳಿಗೆ ಸಂಬಂಧಿಸಿದ ಸಾಮಾನ್ಯ ಉಪಬಂಧಗಳು.-** ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ತಪ್ಪಿದ ಅಥವಾ ಅದನ್ನು ಉಲ್ಲಂಘಿಸಿದ ಯಾರೇ ವ್ಯಕ್ತಿಯಾಗಲಿ, ಈ ಅಧಿನಿಯಮದಲ್ಲಿ, ಯಾವುದೇ ನಿರ್ದಿಷ್ಟ ದಂಡವನ್ನು ಉಪಬಂಧಿಸಿರದಿದ್ದಲ್ಲಿ, ಅಪರಾಧ ನಿರ್ಣಯವಾದ ಮೇಲೆ,-

(ಎ) ಮೊದಲನೇ ಅಪರಾಧಕ್ಕಾಗಿ [1][ಮೂರು ತಿಂಗಳುಗಳ][1]ವರೆಗೆ ವಿಸ್ತರಿಸಬಹುದಾದ ಸಾದಾ ಕಾರಾವಾಸದಿಂದ ಅಥವಾ [1][ಒಂದು ಸಾವಿರ][1] ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಅಥವಾ ಇವೆರಡರಿಂದಲೂ; ಮತ್ತು

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಎರಡನೇ ಅಥವಾ ತರುವಾಯದ ಅಪರಾಧಕ್ಕಾಗಿ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ [1][ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ][1] ದಂಡದಿಂದ ಅಥವಾ ಇವೆರಡರಿಂದಲೂ

- ದಂಡಿತರಾಗತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 77ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**40. ಹಿಂದೂ ಅವಿಭಕ್ತ ಕುಟುಂಬ, ನಿಗಮ, ಮುಂತಾದವುಗಳಿಂದ ಅಪರಾಧಗಳು.-** (1) ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಯು, ಒಂದು ಅವಿಭಕ್ತ ಹಿಂದೂ ಕುಟುಂಬವಾಗಿದ್ದರೆ, ಅಂಥ ಕುಟುಂಬದ ವ್ಯವಹಾರಗಳ ನಿರ್ವಹಣೆಗೆ ಜವಾಬ್ದಾರನಾದ ವ್ಯಕ್ತಿಯನ್ನು, ಅಂಥ ಉಲ್ಲಂಘನೆಯ ತಪ್ಪಿತಸ್ಥನೆಂದು ಭಾವಿಸತಕ್ಕದ್ದು.

(2) (ಎ) ಈ ಅಧಿನಿಯಮದ ಅಡಿಯಲ್ಲಿನ ಒಂದು ಅಪರಾಧವನ್ನು ಒಂದು ಕಂಪನಿಯು ಮಾಡಿದ್ದರೆ, ಅಂಥ ಅಪರಾಧ ನಡೆದ ಸಮಯದಲ್ಲಿ ಅದರ ಪ್ರಭಾರದಲ್ಲಿದ್ದ ಮತ್ತು ಕಂಪನಿಯ ವ್ಯವಹಾರವನ್ನು ನಡೆಸಲು ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತಮ್ಮ ವಿರುದ್ಧದ ವ್ಯವಹರಣೆಗಳಿಗೆ ಬದ್ಧರಾಗಿರತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು:

ಪರಂತು, ಯಾರೇ ಅಂಥ ವ್ಯಕ್ತಿಯು, ಆ ಅಪರಾಧವು ಅವನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಯಲು ಎಲ್ಲ ಯುಕ್ತ ಎಚ್ಚರಿಕೆಯನ್ನು ವಹಿಸಿದ್ದನೆಂದು ರುಜುವಾತು ಪಡಿಸಿದರೆ, ಈ ಖಂಡದಲ್ಲಿ ಒಳಗೊಂಡಿರುವುದು ಯಾವುದೂ, ಅಂಥ ಯಾರೇ ವ್ಯಕ್ತಿಯನ್ನು ಈ ಅಧಿನಿಯಮದಲ್ಲಿ ಉಪಬಂಧಿಸಲಾದ ಯಾವುದೇ ಶಿಕ್ಷೆಗೆ ಬದ್ಧನನ್ನಾಗಿಸತಕ್ಕದ್ದಲ್ಲ.

(ಬಿ) (ಎ) ಖಂಡದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಒಂದು ಅಪರಾಧವನ್ನು ಒಂದು ಕಂಪನಿಯು ಮಾಡಿದ್ದಲ್ಲಿ ಮತ್ತು ಇದನ್ನು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯೊಂದಿಗೆ ಅಥವಾ ಅವರ ಯಾವುದೇ ನಿರ್ಲಕ್ಷ್ಯದಿಂದ ನಡೆದಿರುವುದೆಂದು ರುಜುವಾತಾದಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರ ದಂಡಿತರಾಗತಕ್ಕದ್ದು.

ವಿವರಣೆ.- ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) " ಕಂಪನಿ " ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಇದು ಒಂದು ಫರ್ಮನ್ನು ಅಥವಾ ಇತರ ವ್ಯಕ್ತಿಗಳ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿಗೆ ಸಂಬಂಧಿಸಿದಂತೆ " ನಿರ್ದೇಶಕ " ಎಂದರೆ, ಫರ್ಮಿನ ಒಬ್ಬ ಪಾಲುದಾರ.

**41. ಕೆಲವು ಅಪರಾಧಗಳು ಸಂಜ್ಞೇಯವಾಗಿರುವುದು.-** (ಎ) 5ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿದ್ದಕ್ಕಾಗಿ 39ನೇ ಪ್ರಕರಣದ ಮೇರೆಗಿನ; ಮತ್ತು

(ಬಿ) 38ನೇ ಪ್ರಕರಣದ ಮೇರೆಗಿನ ಶಿಕ್ಷಾರ್ಹವಾದ ಅಪರಾಧಗಳು

- ಸಂಜ್ಞೇಯವಾಗಿರತಕ್ಕದ್ದು.

**42. ಪ್ರತಿಯೊಬ್ಬ ಅಧಿಕಾರಿಯು ಸರ್ಕಾರಿ ನೌಕರನಾಗಿರುವುದು.-** ಈ ಅಧಿನಿಯಮದ ಉಪಬಂಧಗಳ ಮೇರೆಗೆ ಕಾರ್ಯ ನಿರ್ವಹಿಸುವ ಪ್ರತಿಯೊಬ್ಬ ಸರ್ಕಾರಿ ಅಧಿಕಾರಿಯನ್ನು, ಭಾರತೀಯ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸರ್ಕಾರಿ ನೌಕರನೆಂದು ಭಾವಿಸತಕ್ಕದ್ದು.

**43. ಕೃಷಿಕರ ಋಣಕ್ಕೆ ಸಂಬಂಧಿಸಿದ ಕಾನೂನುಗಳ ಉಳಿಸುವಿಕೆ.-** ಈ ಅಧಿನಿಯಮದಲ್ಲಿರುವುದು ಯಾವುದೂ, ಕೃಷಿಕರ ಋಣ ಪರಿಹಾರಕ್ಕೆ ಸಂಬಂಧಿಸಿದ ಯಾವುದೇ ಅಧಿನಿಯಮಿತಿಯ ಯಾವುದೇ ಉಪಬಂಧವನ್ನು ಬಾಧಿಸತಕ್ಕದ್ದಲ್ಲ.

**44. ನಿಯಮಗಳು.-** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ, ಈ ಅಧಿನಿಯಮದ ಉದ್ದೇಶಗಳನ್ನು ಪಾಲಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ಅಂಥ ನಿಯಮಗಳು ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗೆ ಉಪಬಂಧ ಕಲ್ಪಿಸಬಹುದು:-

(ಎ) 4ನೇ ಪ್ರಕರಣದ ಅಡಿಯಲ್ಲಿನ ರಿಜಿಸ್ಟರ್ ನಮೂನೆ;

(ಬಿ) ಲೈಸೆನ್ಸಿಗಾಗಿ ಒಂದು ಅರ್ಜಿ ನಮೂನೆ, ಅದರಲ್ಲಿ ಸೇರಿಸಬೇಕಾದ ಹೆಚ್ಚಿನ ವಿವರಗಳು ಮತ್ತು 6ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸ್ ಫೀಜು ಸಂದಾಯ ಮಾಡುವ ವಿಧಾನ;

(ಸಿ) ಲೈಸೆನ್ಸ್ ನಮೂನೆ ಮತ್ತು ಷರತ್ತುಗಳು ಮತ್ತು 7ನೇ ಪ್ರಕರಣದ ಅಡಿಯಲ್ಲಿನ ಒಂದು ಸಂಕ್ಷಿಪ್ತ ವಿಚಾರಣೆಯ ಕಾರ್ಯ ವಿಧಾನ;

(ಡಿ) ನಗದು ಪುಸ್ತಕ ಮತ್ತು ಲೆಡ್ಜರ್ ನಮೂನೆ ಮತ್ತು 20ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಅವುಗಳನ್ನು ನಿರ್ವಹಿಸಬೇಕಾದ ವಿಧಾನ ಮತ್ತು ಆ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿ ನಿಯಮಿಸಬೇಕಾದ ವಿವರಗಳು;

(ಇ) 21ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಒದಗಿಸಬೇಕಾದ ಅಥವಾ ಕಳುಹಿಸಬೇಕಾದ ಲೆಕ್ಕಗಳ ವಿವರಣ ಪಟ್ಟಿ ಮತ್ತು ಪಾಸ್ ಬುಕ್ಕುಗಳ ನಮೂನೆ ಮತ್ತು ಅದನ್ನು ಯಾವ ದಿನಾಂಕಕ್ಕೆ ಮುಂಚೆ ಒದಗಿಸಬೇಕು ಅಥವಾ ಕಳುಹಿಸಬೇಕು, (2)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಫೀಜು ಮತ್ತು (3)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ವೆಚ್ಚಗಳ ಮೊತ್ತ;

(ಎಫ್) ಯಾವ ದರಗಳಲ್ಲಿ ಮತ್ತು ಯಾವ ರೀತಿಯಲ್ಲಿ 22ನೇ ಪ್ರಕರಣದ ಅಡಿಯಲ್ಲಿ ಫೀಜನ್ನು ವಸೂಲು ಮಾಡಬೇಕು;

(ಜಿ) 33ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿನ ಅರ್ಜಿ ನಮೂನೆ ಮತ್ತು ಸಂದಾಯ ಮಾಡಬೇಕಾದ ಫೀಜು;

(ಎಚ್) ಈ ಅಧಿನಿಯಮದ ಅಡಿಯಲ್ಲಿ ಅಪೀಲುಗಳನ್ನು ಸಲ್ಲಿಸಬೇಕಾದ ಅವಧಿ ಮತ್ತು ಅಂಥ ಅಪೀಲುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜು;

(ಐ) ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ ಅಥವಾ ಈ ಅಧಿನಿಯಮದಲ್ಲಿ ಉಪಬಂಧ ಕಲ್ಪಿಸಿಲ್ಲದ ಅಥವಾ ಸಾಕಷ್ಟು ಉಪಬಂಧ ಕಲ್ಪಿಸಿಲ್ಲದ ಇತರ ಯಾವುದೇ ವಿಷಯ ಮತ್ತು ಯಾವುವೇ ವಿಷಯಗಳ ಸಂಬಂಧದಲ್ಲಿ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವುದು ಅವಶ್ಯವೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಡುವ ಉಪಬಂಧ.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ, ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಇಡತಕ್ಕದ್ದು

ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನದ ಅಥವಾ ಮುಂಬರುವ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಒಪ್ಪಿದರೆ ಅಥವಾ ಎರಡೂ ಸದನಗಳು ನಿಯಮಗಳನ್ನು ರಚಿಸಬಾರದೆಂದು ಒಪ್ಪಿದರೆ, ನಿಯಮವು ಆ ನಂತರ ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ , ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕ ಉಂಟು ಮಾಡತಕ್ಕದ್ದಲ್ಲ.

**45. ನಿರಸನ ಮತ್ತು ಉಳಿಸುವಿಕೆಗಳು.-** [1][ಬೆಳಗಾವಿ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮುಂಬೈ ಲೇವಾದೇವಿದಾರರ ಅಧಿನಿಯಮ, 1946ನ್ನು (1947ರ ಮುಂಬೈ ಅಧಿನಿಯಮ-XXXI); ಕೂರ್ಗ್ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಕೊಡಗು ಲೇವಾದೇವಿದಾರರ ಅಧಿನಿಯಮ, 1939ನ್ನು (1939ರ ಕೊಡಗು ಅಧಿನಿಯಮ-I); [1][ಗುಲ್ಬರ್ಗ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಹೈದರಾಬಾದ್ ಲೇವಾದೇವಿದಾರರ ಅಧಿನಿಯಮ, 1349 ಪಸಲಿ (1349ರ ಫಸಲಿ ಹೈದರಾಬಾದ್ ಅಧಿನಿಯಮ-V) ಮತ್ತು ಹೈದರಾಬಾದ್ ಲೇವಾದೇವಿದಾರರ (ಲೈಸೆನ್ಸ್ ಗಳನ್ನು ಮಾನ್ಯ ಮಾಡುವುದು) ಅಧಿನಿಯಮ, 1956ನ್ನು (1956ರ ಹೈದರಾಬಾದ್ ಅಧಿನಿಯಮ XLVIII); [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮುದ್ರಾಸ್ ಸಾಲಗಾರರ ರಕ್ಷಣಾ ಅಧಿನಿಯಮ, 1934ನ್ನು (1935ರ ಮದ್ರಾಸ್ ಅಧಿನಿಯಮ VII) ಮತ್ತು ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರು ಲೇವಾದೇವಿದಾರರ ಅಧಿನಿಯಮ, 1939 ನ್ನು (1939ರ ಮೈಸೂರು ಅಧಿನಿಯಮ XII) ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 ರ (1899ರ [1][ಕರ್ನಾಟಕ ಅಧಿನಿಯಮ][1] III) 6ನೇ ಪ್ರಕರಣವು ಸದರಿ ಅಧಿನಿಯಮಿತಿಗಳ ನಿರಸನದ ಸಂಬಂಧದಲ್ಲಿ ಅನ್ವಯಿಸತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳು, ಈ ಅಧಿನಿಯಮದ ಮೂಲಕ ಸದರಿ ಅಧಿನಿಯಮಿತಿಗಳನ್ನು ನಿರಸನಗೊಳಿಸಲಾಗಿದೆಯೆಂಬಂತೆ ಮತ್ತು ಪುನರ್ ಅಧಿನಿಯಮಿತಿಗೊಳಿಸಲಾಗಿದೆಯೆಂಬಂತೆ ಅನ್ವಯವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**ಅಧಿಸೂಚನೆ**

**ಬೆಂಗಳೂರು, ದಿನಾಂಕ 23ನೇ ಮಾರ್ಚ್, 1965 [ಸಂ. ಎಎಫ್ 41 ಸಿಸಿಎಸ್ 62]**

**ಎಸ್.ಓ.2175.-** ಮೈಸೂರು ಲೇವಾದೇವಿದಾರರ ಅಧಿನಿಯಮ, 1961 (1962ರ ಮೈಸೂರು ಅಧಿನಿಯಮ 12) 1ನೇ ಪ್ರಕರಣದ (3)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1965ರ ಏಪ್ರಿಲ್ ಒಂದನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ರಾಮನಾಥನ್

ಕಾರ್ಯದರ್ಶಿ

(1965ರ ಏಪ್ರಿಲ್ 1ನೇ ದಿನಾಂಕದ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ-IV 2ಸಿ (ii) ರ ಪುಟ 517 ರಲ್ಲಿ ಪ್ರಕಟವಾಗಿದೆ.)

# ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965

ನಿಯಮಗಳ ಅನುಕ್ರಮಣಿಕೆ

**ನಿಯಮಗಳು:**

1. ಹೆಸರು.
2. ಪರಿಭಾಷೆಗಳು.
3. ಲೇವಾದೇವಿದಾರರ ರಿಜಿಸ್ಟರು.
4. ಲೈಸೆನ್ಸ್ ಹೊಂದಿದ ಲೇವಾದೇವಿದಾರರ ಪಟ್ಟಿಯನ್ನು ಪ್ರದರ್ಶಿಸುವುದು.
5. ಲೈಸೆನ್ಸಿಗಾಗಿ ಅರ್ಜಿ.
6. ವ್ಯವಸ್ಥಾಪನೆಯ ಪಾಲುಗಾರಿಕೆಯಲ್ಲಿ ಬದಲಾವಣೆ.
7. ವಿಳಾಸದ ಬದಲಾವಣೆ.
8. 7ನೇ ಪ್ರಕರಣದ ಅಡಿಯಲ್ಲಿ ಸಂಕ್ಷಿಪ್ತ ವಿಚಾರಣೆಯ ಕಾರ್ಯವಿಧಾನ.
9. ಲೈಸೆನ್ಸಿನ ನಮೂನೆ.
10. ಲೈಸೆನ್ಸ್ ಫೀಜನ್ನು ಸಂದಾಯ ಮಾಡುವ ವಿಧಾನ.
11. ಲೈಸೆನ್ಸ್ ನೀಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ಆದೇಶದ ಬಗ್ಗೆ ತಿಳಿಸುವುದು.
12. ಲೈಸೆನ್ಸ್ ನೀಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ರಿಜಿಸ್ಟ್ರಾರನ ಆದೇಶದ ವಿರುದ್ಧ ಅಪೀಲು.
13. ಲೈಸೆನ್ಸನ್ನು ಪ್ರದರ್ಶಿಸುವುದು.
14. ದ್ವಿಪ್ರತಿ ಲೈಸೆನ್ಸ್ ನೀಡುವುದು.

14ಎ. ಭದ್ರತಾ ಮೊಬಲಗಿನ ಸಂದಾಯ.

14ಬಿ. 7 ಎ ಪ್ರಕರಣದ ಅಡಿಯಲ್ಲಿ ಮೊಬಲಗಿನ ಘೋಷಣೆ.

14ಸಿ. 7 ಬಿ ಪ್ರಕರಣದ ಅಡಿಯಲ್ಲಿ ಆದೇಶದ ಬಗ್ಗೆ ತಿಳಿಸುವುದು.

14ಡಿ. ಮುಟ್ಟುಗೋಲು ಹಾಕಿಕೊಳ್ಳಲಾದ ಮೊಬಲಗಿನಿಂದ ಸಂದಾಯ.

14ಇ. ಭದ್ರತಾ ಮೊಬಲಗಿನ ಮರುಪಾವತಿ.

15. 20 ನೇ ಪ್ರಕರಣದ ಅಡಿಯಲ್ಲಿನ ನಗದಿ ಪುಸ್ತಕ, ಲೆಡ್ಜರ್ ಮತ್ತು ವಿವರಪತ್ರದ ನಮೂನೆಗಳು.
16. 21 ನೇ ಪ್ರಕರಣದ ಅಡಿಯಲ್ಲಿ ಲೇವಾದೇವಿದಾರನು ಸಾಲಗಾರ, ಮುಂತಾದವರಿಗೆ ತಲುಪಿಸಬೇಕಾದ ವಾರ್ಷಿಕ ಲೆಕ್ಕಪತ್ರಗಳ ವಿವರಪತ್ರ.
17. ವಿವರಣ ಪತ್ರಗಳನ್ನು ಅಥವಾ ಪಾಸ್ ಬುಕ್ಕುಗಳನ್ನು ಒದಗಿಸುವುದಕ್ಕೆ ಫೀಜುಗಳು.
18. ಪಾಸ್ ಬುಕ್ಕಿನ ನಮೂನೆ.
19. ಸಾಲದ ಹಸ್ತಾಂತರಣದ ತರುವಾಯ ನೀಡಬೇಕಾದ ನೋಟೀಸು ಮತ್ತು ಮಾಹಿತಿ.
20. 33 ನೇ ಪ್ರಕರಣದ ಅಡಿಯಲ್ಲಿನ ಅರ್ಜಿ ನಮೂನೆ.
21. ಫೀಜುಗಳನ್ನು ಸಂದಾಯ ಮಾಡಿದ ತರುವಾಯ ದಸ್ತಾವೇಜುಗಳ ಪ್ರತಿಗಳ ನೀಡಿಕೆ.
22. ಸಮನುಗಳ ನಮೂನೆಗಳು.

| | |
|---|---|
| ನಮೂನೆ 1 | ನಮೂನೆ 8 |
| ನಮೂನೆ 2 | ನಮೂನೆ 9 |
| ನಮೂನೆ 3 | ನಮೂನೆ 10 |
| ನಮೂನೆ 4 | ನಮೂನೆ 11 |
| ನಮೂನೆ 5 | ನಮೂನೆ 12 |
| ನಮೂನೆ 5ಎ | ನಮೂನೆ 13 |
| ನಮೂನೆ 6 | ನಮೂನೆ 14 |
| ನಮೂನೆ 7 | ನಮೂನೆ 15 |

## ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965

*(ಜಿಎಸ್ ಆರ್ 222, ದಿನಾಂಕ: 12/13.9.1985 ಮತ್ತು ಜಿ ಎಸ್ ಆರ್ 76, ದಿನಾಂಕ 10.3.1988ರ ಮೂಲಕ ತಿದ್ದುಪಡಿಯಾದಂತೆ)*

**ಜಿಎಸ್ಆರ್ 492.-** [1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ (1962ರ [1][ಕರ್ನಾಟಕ][1] ಅಧಿನಿಯಮ 12) 44ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, [1][ಕರ್ನಾಟಕ ಸರ್ಕಾರವು][1], ಈ ಮೂಲಕ ಮುಂದಿನ ನಿಯಮಗಳನ್ನು ರಚಿಸುತ್ತದೆ ಮತ್ತು ಅವುಗಳನ್ನು ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ದಿನಾಂಕ 13ನೇ ಡಿಸೆಂಬರ್, 1962ರ [1][ಕರ್ನಾಟಕ ರಾಜ್ಯಪತ್ರ][1] ದ ಭಾಗ IV, ಪ್ರಕರಣ 2 ಸಿ (i) ರಲ್ಲಿ ಈ ಹಿಂದೆಯೇ ಪ್ರಕಟಿಸಲಾಗಿದೆ, ಎಂದರೆ:-

**1. ಹೆಸರು.-** ಈ ನಿಯಮಗಳನ್ನು [1][ಕರ್ನಾಟಕ][1] ಲೇವಾದೇವಿದಾರರ ನಿಯಮಗಳು, 1965 ಎಂದು ಕರೆಯತಕ್ಕದ್ದು.

**2. ಪರಿಭಾಷೆಗಳು.-** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಅಧಿನಿಯಮ" ಎಂದರೆ [1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961;

1. 1973 ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಬಿ) "ನಮೂನೆ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ;

(ಸಿ) "ಪ್ರಕರಣ" ಎಂದರೆ ಈ ಅಧಿನಿಯಮದ ಒಂದು ಪ್ರಕರಣ.

**3. ಲೇವಾದೇವಿದಾರರ ರಿಜಿಸ್ಟರು.-** 4ನೇ ಪ್ರಕರಣದ ಅಡಿಯಲ್ಲಿ ನಿರ್ವಹಿಸಬೇಕೆಂದು ಅಗತ್ಯಪಡಿಸಲಾದ ಲೇವಾದೇವಿದಾರರ ರಿಜಿಸ್ಟರು ನಮೂನೆ 1ರಲ್ಲಿರತಕ್ಕದ್ದು.

**4. ಲೈಸೆನ್ಸ್ ಹೊಂದಿದ ಲೇವಾದೇವಿದಾರರ ಪಟ್ಟಿಯನ್ನು ಪ್ರದರ್ಶಿಸುವುದು.-** ಪ್ರತಿಯೊಬ್ಬ ಸಹಾಯಕ ರಿಜಿಸ್ಟ್ರಾರನು, ತನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಪ್ರದೇಶದಲ್ಲಿ ಲೇವಾದೇವಿ ವ್ಯವಹಾರವನ್ನು ನಡೆಸಿಕೊಂಡು ಹೋಗುವ ಸಲುವಾಗಿ ಲೈಸೆನ್ಸು ಹೊಂದಿರುವ ಲೇವಾದೇವಿದಾರರ ಒಂದು ಪಟ್ಟಿಯನ್ನು ತನ್ನ ಕಚೇರಿಯ ಸೂಚನಾ ಫಲಕದಲ್ಲಿ ಪ್ರದರ್ಶಿಸತಕ್ಕದ್ದು. ಅಂಥ ಪಟ್ಟಿಯಲ್ಲಿ ಲೇವಾದೇವಿದಾರರ ವಿಳಾಸಗಳು ಇರತಕ್ಕದ್ದು.

**5. ಲೈಸೆನ್ಸಿಗಾಗಿ ಅರ್ಜಿ.-** (1) ಯಾವುದೇ ಪ್ರದೇಶದಲ್ಲಿ ಲೇವಾದೇವಿ ವ್ಯವಹಾರ ನಡೆಸಲು ಇಚ್ಛಿಸುವ ಒಬ್ಬ ಲೇವಾದೇವಿದಾರನು, ಸಂಬಂಧಪಟ್ಟ ಸಹಾಯಕ ರಿಜಿಸ್ಟ್ರಾರರಿಗೆ ನಮೂನೆ 2ರಲ್ಲಿ ಒಂದು ಅರ್ಜಿಯನ್ನು ಸಲ್ಲಿಸತಕ್ಕದ್ದು. ಅರ್ಜಿಯನ್ನು, ಕಚೇರಿಯ ಕೆಲಸದ ವೇಳೆಯಲ್ಲಿ ಅರ್ಜಿದಾರನು ತಾನೇ ಸ್ವತಃ ಅಥವಾ ಈ ಸಂಬಂಧದಲ್ಲಿ ಲಿಖಿತದಲ್ಲಿ ಯುಕ್ತವಾಗಿ ಪ್ರಾಧಿಕೃತನಾದ ಏಜೆಂಟನ ಮೂಲಕ, ಸಹಾಯಕ ರಿಜಿಸ್ಟ್ರಾರನ ಕಚೇರಿಗೆ ತಲುಪಿಸತಕ್ಕದ್ದು ಅಥವಾ ನೋಂದಾಯಿತ ಅಂಚೆ ಮೂಲಕ ಸಹಾಯಕ ರಿಜಿಸ್ಟ್ರಾರನ ವಿಳಾಸಕ್ಕೆ ಕಳುಹಿಸತಕ್ಕದ್ದು.

(2) ಮೊದಲ ಬಾರಿ ಲೈಸೆನ್ಸಿನ ಮಂಜೂರಾತಿಗಾಗಿ ಒಂದು ಅರ್ಜಿಯನ್ನು ಯಾವುದೇ ದಿನದಂದು ಸಲ್ಲಿಸಬಹುದು ಮತ್ತು [1][ತರುವಾಯದ ವರ್ಷಕ್ಕಾಗಿ ಹೊಸ ಲೈಸೆನ್ಸಿನ ಮಂಜೂರಾತಿಗಾಗಿ][1] ಒಂದು ಅರ್ಜಿಯನ್ನು [2][ಪ್ರತಿವರ್ಷದ ಅಕ್ಟೋಬರ್ ತಿಂಗಳ ಕೊನೆಯ ದಿನಕ್ಕೆ ಮುಂಚೆ][2] ಸಲ್ಲಿಸತಕ್ಕದ್ದು:

1. ಜಿಎಸ್ಆರ್ 222, ದಿನಾಂಕ: 12/13.9.1998ರ ಮೂಲಕ "ಲೈಸೆನ್ಸಿನ ನವೀಕರಣ" ಎಂಬ ಪದಗಳಿಗೆ ಪ್ರತಿಯೋಜಿಸಲಾಗಿದೆ. (ಕರ್ನಾಟಕ ರಾಜ್ಯಪತ್ರ, ಭಾಗ IV- 2 ಸಿ (i) (ವಿಶೇಷ ಸಂಚಿಕೆ) ಸಂಖ್ಯೆ 498, ದಿನಾಂಕ 17.9.1985)
2. ಜಿ ಎಸ್ ಆರ್ 76, ದಿನಾಂಕ 10.3.1988ರ ಮೂಲಕ "ಲೈಸೆನ್ಸಿನ ಅವಧಿಯು ಮುಕ್ತಾಯ ವಾಗುವುದಕ್ಕೆ ಮುಂಚೆ ಎರಡು ತಿಂಗಳೊಳಗೆ ಯಾವುದೇ ದಿನಾಂಕದಂದು" ಎಂಬ ಪದಗಳಿಗೆ ಪ್ರತಿಯೋಜಿಸಲಾಗಿದೆ. (ಕರ್ನಾಟಕ ರಾಜ್ಯಪತ್ರ, ಭಾಗ IV- 2 ಸಿ (i) (ವಿಶೇಷ ಸಂಚಿಕೆ) ಸಂಖ್ಯೆ 168, ದಿನಾಂಕ 19.3.1998)

[1][ಪರಂತು, ಮೊದಲ ಬಾರಿ ಒಂದು ಲೈಸೆನ್ಸಿನ ಮಂಜೂರಾತಿಗಾಗಿ ಒಂದು ಅರ್ಜಿಯನ್ನು ವರ್ಷದ ನವೆಂಬರ್ ಮೊದಲ ದಿನದ ಮತ್ತು ಡಿಸೆಂಬರ್ ಮೂವತ್ತೊಂದನೆಯ ದಿನದ ನಡುವೆ ಸಲ್ಲಿಸಿದ್ದರೆ, ತರುವಾಯದ ವರ್ಷದ ಒಂದು ಹೊಸ ಲೈಸೆನ್ಸಿಗಾಗಿನ ಅರ್ಜಿಯನ್ನು ಲೈಸೆನ್ಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಲ್ಲಿಸತಕ್ಕದ್ದು][1].

1. ಜಿ ಎಸ್ ಆರ್ 76 ದಿನಾಂಕ 10.3.1988ರ ಮೂಲಕ ಸೇರಿಸಲಾಗಿದೆ. (ಕರ್ನಾಟಕ ರಾಜ್ಯಪತ್ರ ಭಾಗ IV 2 ಸಿ (i) (ವಿಶೇಷ ಸಂಚಿಕೆ) ಸಂಖ್ಯೆ 168, ದಿನಾಂಕ 16.3.1998)

**6. ವ್ಯವಸ್ಥಾಪನೆಯ ಪಾಲುಗಾರಿಕೆಯಲ್ಲಿ ಬದಲಾವಣೆ.-** ಒಂದು ಲೈಸೆನ್ಸ್ ಚಾಲ್ತಿಯಲ್ಲಿರುವ ಅವಧಿಯಲ್ಲಿ, ಒಬ್ಬ ಹೊಸಪಾಲುಗಾರನನ್ನು ತೆಗೆದುಕೊಂಡಿದ್ದರೆ ಅಥವಾ ಒಬ್ಬ ವ್ಯಕ್ತಿಯನ್ನು ಲೇವಾದೇವಿ ವ್ಯವಹಾರದ ವ್ಯವಸ್ಥಾಪನೆಗೆ ಜವಾಬ್ದಾರನೆಂದು

ನೇಮಕ ಮಾಡಿಕೊಂಡಿದ್ದರೆ, ಲೇವಾದೇವಿದಾರನು, ಹಾಗೆ ತೆಗೆದುಕೊಂಡ ಆ ಪಾಲುಗಾರನ ಅಥವಾ ಹಾಗೆ ನೇಮಕ ಮಾಡಿಕೊಂಡ ವ್ಯಕ್ತಿಯ ಹೆಸರನ್ನು ಏಳು ದಿನಗಳ ಒಳಗಾಗಿ ರಿಜಿಸ್ಟ್ರಾರನಿಗೆ ತಿಳಿಸತಕ್ಕದ್ದು ಮತ್ತು 8ನೇ ಪ್ರಕರಣದಲ್ಲಿ ನಮೂದಿಸಲಾಗಿರುವ ಯಾವುವೇ ಕಾರಣಗಳ ಮೇಲೆ ಸ್ವತಃ ಲೈಸೆನ್ಸ್ ಹೊಂದಿರಲು ಅನರ್ಹನಾಗಿರುವ ತಾನೆ ಆ ಹೊಸ ಪಾಲುಗಾರ ಅಥವಾ ಹಾಗೆ ನೇಮಕ ಮಾಡಿಕೊಂಡ ವ್ಯಕ್ತಿ ಅಲ್ಲವೆಂಬುದನ್ನು ರಿಜಿಸ್ಟ್ರಾರನಿಗೆ ಮನದಟ್ಟು ಮಾಡಿಕೊಡತಕ್ಕದ್ದು.

**7. ವಿಳಾಸದ ಬದಲಾವಣೆ.-** ಒಬ್ಬ ಲೇವಾದೇವಿದಾರನು, ತನ್ನ ವಿಳಾಸದಲ್ಲಿ ಯಾವುದೇ ಬದಲಾವಣೆಯಾದರೆ ಅಂಥ ಬದಲಾವಣೆಯ ಏಳು ದಿನಗಳ ಒಳಗಾಗಿ ಹೊಸ ವಿಳಾಸದ ಪೂರ್ಣ ವಿವರಗಳನ್ನು ನೀಡಿ ಆ ಬಗ್ಗೆ ರಿಜಿಸ್ಟ್ರಾರನಿಗೆ ತಿಳಿಸತಕ್ಕದ್ದು.

**8. 7ನೇ ಪ್ರಕರಣದ ಅಡಿಯಲ್ಲಿ ಸಂಕ್ಷಿಪ್ತ ವಿಚಾರಣೆಯ ಕಾರ್ಯ ವಿಧಾನ:-** ಸಹಾಯಕ ರಿಜಿಸ್ಟ್ರಾರನು, ಅರ್ಜಿದಾರನ ಪ್ರಾಮಾಣಿಕತೆ ಬಗ್ಗೆ ಮತ್ತು ಲೇವಾದೇವಿ ವ್ಯವಹಾರವನ್ನು ನಡೆಸಿಕೊಂಡು ಹೋಗುವಲ್ಲಿ ಅವನ ಸಾಮರ್ಥ್ಯವನ್ನು ಮನದಟ್ಟು ಮಾಡಿಕೊಳ್ಳುವ ದೃಷ್ಟಿಯಿಂದ, ಅರ್ಜಿದಾರನಿಂದ ಅಂಥ ಮಾಹಿತಿಯನ್ನು ತರಿಸಿಕೊಳ್ಳುವ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದಂಥ ವ್ಯಕ್ತಿಗಳನ್ನು ಪರೀಕ್ಷಿಸುವ ಮೂಲಕ 7ನೇ ಪ್ರಕರಣದ ಅಡಿಯಲ್ಲಿ ಸಂಕ್ಷಿಪ್ತ ವಿಚಾರಣೆಯನ್ನು ನಡೆಸತಕ್ಕದ್ದು. ಒದಗಿಸಲಾದ ಮಾಹಿತಿಯಿಂದ ಮತ್ತು ಮಾಡಿದ ಪರೀಕ್ಷೆಯಿಂದ ಸಹಾಯಕ ರಿಜಿಸ್ಟ್ರಾರನಿಗೆ ಹಾಗೆ ಮನದಟ್ಟಾಗದಿದ್ದರೆ, ಅವನು ಅರ್ಜಿದಾರನನ್ನು ಸ್ವತಃ ಪರೀಕ್ಷಿಸಬಹುದು. ಸಹಾಯಕ ರಿಜಿಸ್ಟ್ರಾರನು, ತಾನು ಯುಕ್ತವಾಗಿ ಸಹಿ ಮಾಡಿದ ವಿಚಾರಣೆಯ ಒಂದು ದಾಖಲೆಯನ್ನು ನಿರ್ವಹಿಸತಕ್ಕದ್ದು. ಆ ದಾಖಲೆಯು, ಪಡೆದುಕೊಂಡ ಸಾಕ್ಷ್ಯದ ಒಂದು ಸಂಕ್ಷಿಪ್ತ ಟಿಪ್ಪಣಿಯನ್ನು ಮತ್ತು ವಿಚಾರಣೆಯ ಅವಧಿಯಲ್ಲಿ ಹೊರಬಿದ್ದ ಸಂಗತಿಗಳನ್ನು ಕುರಿತು ನಿರ್ಣಯಗಳ ಒಂದು ಸಾರಾಂಶವನ್ನು ಒಳಗೊಂಡಿರತಕ್ಕದ್ದು.

**9. ಲೈಸೆನ್ಸಿನ ನಮೂನೆ.-** 7ನೇ ಪ್ರಕರಣದ ಅಡಿಯಲ್ಲಿನ ಲೈಸೆನ್ಸು ನಮೂನೆ 3 ರಲ್ಲಿರತಕ್ಕದ್ದು.

**10. ಲೈಸೆನ್ಸ್ ಫೀಜನ್ನು ಸಂದಾಯ ಮಾಡುವ ವಿಧಾನ:-** (1) ಅರ್ಜಿಯನ್ನು ಸಲ್ಲಿಸುವ ಸಮಯದಲ್ಲಿ 6 ನೇ ಪ್ರಕರಣದ ಅಡಿಯಲ್ಲಿ [1][ಸಂದಾಯ ಮಾಡಬೇಕಾದ][1] ಲೈಸೆನ್ಸ್ ಫೀಜನ್ನು ನಗದು ರೂಪದಲ್ಲಿ ಅಥವಾ ಸಹಾಯಕ ರಿಜಿಸ್ಟ್ರಾರನ ವಿಳಾಸಕ್ಕೆ ಅಂಚೆಯ ಮನಿ ಆರ್ಡರ್ ಕಳುಹಿಸುವ ಮೂಲಕ ಅಥವಾ ಖಜಾನೆಯಲ್ಲಿ ಅಥವಾ ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಸರ್ಕಾರದ ಲೆಕ್ಕಕ್ಕೆ ಜಮೆ ಮಾಡುವ ಮೂಲಕ ಸಂದಾಯ ಮಾಡತಕ್ಕದ್ದು ಮತ್ತು ಅಂಚೆ ಮನಿಯಾರ್ಡರಿನ ರಸೀದಿ ಅಥವಾ ಚಲನ್ ರಸೀದಿಯನ್ನು ಅರ್ಜಿಯೊಂದಿಗೆ ಸಹಾಯಕ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು.

1. ಜಿಎಸ್‌ಆರ್ 222, ದಿನಾಂಕ 12/13.9.1985ರ ಮೂಲಕ "10 ರೂಪಾಯಿ ಮತ್ತು 3 ರೂಪಾಯಿ" ಎಂಬ ಪದಗಳು ಮತ್ತು ಅಂಕಿಗಳಿಗೆ ಬದಲಾಗಿ ಪ್ರತಿಯೋಜಿಸಲಾಗಿದೆ.

(2) ರಿಜಿಸ್ಟ್ರಾರನು, ಲೈಸೆನ್ಸಿನ ಪ್ರತಿಗಳನ್ನು ಪ್ರಧಾನ ಸ್ಥಳಕ್ಕೆ ಕಳುಹಿಸುವಾಗ ಮತ್ತು ಅರ್ಜಿಯನ್ನು ರಿಜಿಸ್ಟ್ರಾರ್ ಅಥವಾ ಇತರ ರಿಜಿಸ್ಟ್ರಾರ್‌ಗಳಿಗೆ ಕಳುಹಿಸುವಾಗ ಅಗತ್ಯಪಡಿಸಿದ ಲೈಸೆನ್ಸ್ ಫೀಜನ್ನು ಸ್ವೀಕರಿಸಿದ್ದರ ಗುರುತಾಗಿ ಒಂದು ಹಿಂಬರಹವನ್ನು ಮಾಡತಕ್ಕದ್ದು.

**11. ಲೈಸೆನ್ಸ್ ನೀಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ಆದೇಶದ ಬಗ್ಗೆ ತಿಳಿಸುವುದು.-** ಒಬ್ಬ ರಿಜಿಸ್ಟ್ರಾರನು, ಒಂದು ಲೈಸೆನ್ಸನ್ನು ನೀಡಲು ನಿರಾಕರಿಸಿದ ಅಥವಾ ಒಂದು ಲೈಸೆನ್ಸನ್ನು ರದ್ದುಗೊಳಿಸಿದ ಅವನು, ಆ ಆದೇಶದ ಬಗ್ಗೆ ಅರ್ಜಿದಾರನಿಗೆ ಅಥವಾ ಸಂದರ್ಭಾನುಸಾರ ಲೈಸೆನ್ಸ್‌ದಾರನಿಗೆ ತಿಳಿಸತಕ್ಕದ್ದು.

**12. ಲೈಸೆನ್ಸ್ ನೀಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ರಿಜಿಸ್ಟ್ರಾರನ ಆದೇಶದ ವಿರುದ್ಧ ಅಪೀಲು.-** (1) ಒಂದು ಲೈಸೆನ್ಸನ್ನು ನೀಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ರಿಜಿಸ್ಟ್ರಾರನ ಆದೇಶದ ವಿರುದ್ಧ 8ನೇ ಪ್ರಕರಣದ (3) ನೇ ಉಪ ಪ್ರಕರಣ ಅಥವಾ 9ನೇ ಪ್ರಕರಣದ (3) ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ಅಪೀಲನ್ನು ಲೈಸೆನ್ಸನ್ನು ನಿರಾಕರಿಸುವ ಅಥವಾ ರದ್ದುಗೊಳಿಸುವ ಆದೇಶವನ್ನು ಲೇವಾದೇವಿದಾರನಿಗೆ ತಿಳಿಸಿದ ದಿನಾಂಕದಿಂದ 30 ದಿನಗಳ ಒಳಗಾಗಿ ಸಲ್ಲಿಸತಕ್ಕದ್ದು. ರಿಜಿಸ್ಟ್ರಾರನ ಆದೇಶದ ವಿರುದ್ಧ 13 ನೇ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ಅಪೀಲನ್ನು, ಆ ಆದೇಶವನ್ನು ಲೇವಾದೇವಿದಾರನಿಗೆ ಅಥವಾ ಅರ್ಜಿದಾರನಿಗೆ ತಿಳಿಸಿದ ದಿನಾಂಕದಿಂದ 30 ದಿನಗಳ ಒಳಗಾಗಿ ಸಲ್ಲಿಸತಕ್ಕದ್ದು. ಅಂಥ ಅಪೀಲಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜಿನ ಮೊತ್ತವು 10 ರೂಗಳಾಗಿರತಕ್ಕದ್ದು ಮತ್ತು ಅದನ್ನು 10ನೇ ನಿಯಮದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

(2) ರಿಜಿಸ್ಟ್ರಾರ್ ಜನರಲ್ಲನು, ಅಪೀಲುದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ ಅಪೀಲಿನ ಬಗ್ಗೆ ತೀರ್ಮಾನಿಸತಕ್ಕದ್ದು.

**13. ಲೈಸೆನ್ಸನ್ನು ಪ್ರದರ್ಶಿಸುವುದು.-** ಪ್ರತಿಯೊಬ್ಬ ಲೇವಾದೇವಿದಾರನು, ತಾನು ಲೇವಾದೇವಿ ವ್ಯವಹಾರ ನಡೆಸುವ ಆವರಣದ ಒಂದು ಪ್ರಮುಖ ಸ್ಥಳದಲ್ಲಿ ತನ್ನ ಲೈಸೆನ್ಸನ್ನು ಪ್ರದರ್ಶಿಸತಕ್ಕದ್ದು.

**14. ದ್ವಿಪ್ರತಿ ಲೈಸೆನ್ಸ್ ನೀಡುವುದು.-** (1) ಒಬ್ಬ ಲೇವಾದೇವಿದಾರನಿಗೆ ನೀಡಲಾದ ಒಂದು ಲೈಸೆನ್ಸು ಕಳೆದುಹೋಗಿದ್ದರೆ ಅಥವಾ ನಾಶವಾಗಿದ್ದರೆ ಅಥವಾ ಹರಿದು ಹೋಗಿದ್ದರೆ ಅಥವಾ ಅದು ಓದಲಾಗದಂಥ ರೀತಿಯಲ್ಲಿ ಅನ್ಯಥಾ ವಿರೂಪಗೊಂಡಿದ್ದರೆ, ಲೇವಾದೇವಿದಾರನು ದ್ವಿಪ್ರತಿ ಲೈಸೆನ್ಸಿನ ನೀಡಿಕೆಗಾಗಿ ಸಂಬಂಧಪಟ್ಟ ಸಹಾಯಕ ರಿಜಿಸ್ಟ್ರಾರನ ಮೂಲಕ ರಿಜಿಸ್ಟ್ರಾರನಿಗೆ ಒಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಮೂಲ ಲೈಸೆನ್ಸು ಹರಿದುಹೋದ ಅಥವಾ ವಿರೂಪವಾದ ಕಾರಣದ ಮೇಲೆ ಒಂದು ದ್ವಿಪ್ರತಿ ಲೈಸೆನ್ಸ್ ಅಗತ್ಯವಿದ್ದಾಗ, ಲೇವಾದೇವಿದಾರನು (1) ನೇ ಉಪ ನಿಯಮದ ಅಡಿಯಲ್ಲಿನ ಅರ್ಜಿಯೊಂದಿಗೆ ಮೂಲ ಲೈಸೆನ್ಸನ್ನು ರಿಜಿಸ್ಟ್ರಾರನಿಗೆ ಒಪ್ಪಿಸತಕ್ಕದ್ದು.

(3) (1) ನೇ ಉಪ-ನಿಯಮದ ಅಡಿಯಲ್ಲಿನ ಅರ್ಜಿಯ ಜೊತೆಗೆ ಒಂದು ರೂಪಾಯಿ ಫೀಜಿನ ಒಂದು ರಸೀದಿ ಇರತಕ್ಕದ್ದು. ಆ ಫೀಜನ್ನು 10 ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

(4) ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ರಿಜಿಸ್ಟ್ರಾರನು ಅಗತ್ಯವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ಮೇಲೆ ಲೇವಾದೇವಿದಾರನಿಗೆ ಒಂದು ದ್ವಿಪ್ರತಿ ಲೈಸೆನ್ಸನ್ನು ನೀಡಬಹುದೆಂದು ಮನದಟ್ಟಾದರೆ, ಅವನು ಒಂದು ದ್ವಿಪ್ರತಿ ಲೈಸೆನ್ಸನ್ನು ನೀಡತಕ್ಕದ್ದು ಮತ್ತು ಅಂಥ ದ್ವಿಪ್ರತಿ ಲೈಸೆನ್ಸ್ ನೀಡಿಕೆಯ ಬಗ್ಗೆ ರಿಜಿಸ್ಟರಿನಲ್ಲಿ ಅವನ ಹೆಸರಿನ ಮುಂದೆ ಒಂದು ಟಿಪ್ಪಣಿಯನ್ನು ಮಾಡಬೇಕೆಂದು ಸಹಾಯಕ ರಿಜಿಸ್ಟ್ರಾರನಿಗೆ ನಿರ್ದೇಶಿಸತಕ್ಕದ್ದು.

(5) ಹಾಗೆ ನೀಡಿದ ದ್ವಿಪ್ರತಿ ಲೈಸೆನ್ಸಿನ ಮೇಲ್ಭಾಗದಲ್ಲಿ ಮೂಲ ಲೈಸೆನ್ಸಿನ ಸಂಖ್ಯೆ ಮತ್ತು ದಿನಾಂಕ ಇರತಕ್ಕದ್ದು ಮತ್ತು "ದ್ವಿಪ್ರತಿ" ಎಂಬ ಪದವೂ ಸಹ ಇರತಕ್ಕದ್ದು.

[1][**14ಎ. ಭದ್ರತಾ ಮೊಬಲಗಿನ ಸಂದಾಯ.-** (1) ಪ್ರತಿಯೊಬ್ಬ ಲೈಸೆನ್ಸ್‌ದಾರನು, ರಿಜಿಸ್ಟ್ರಾರ್ ಜನರಲ್ಲನು ಅಧಿಸೂಚಿಸಿದ ಲೆಕ್ಕ ಶೀರ್ಷಿಕೆಯಡಿಯಲ್ಲಿ 7ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಭದ್ರತಾ ಮೊಬಲಗನ್ನು ನಗದಾಗಿ ಸರ್ಕಾರದ ಖಜಾನೆಯಲ್ಲಿ ಠೇವಣಿಯಿಡತಕ್ಕದ್ದು.

1. 14ಎ ಯಿಂದ 14ಇ ವರೆಗಿನ ನಿಯಮಗಳನ್ನು ಜಿ ಎಸ್ ಆರ್ 222, ದಿನಾಂಕ 12/13.9.1985ರ ಮೂಲಕ ಸೇರಿಸಲಾಗಿದೆ (ಕರ್ನಾಟಕ ರಾಜ್ಯಪತ್ರ ಭಾಗ IV 2 ಸಿ (i) (ವಿಶೇಷ ಸಂಚಿಕೆ) ಸಂ. 498 ದಿನಾಂಕ 17.9.1985).

(2) ಭದ್ರತಾ ಮೊಬಲಗನ್ನು ಠೇವಣಿಯಾಗಿಟ್ಟ ಬಗ್ಗೆ ಖಜಾನೆ ರಸೀದಿಯನ್ನು ಸಂಬಂಧಿಸಿದ ಸಹಾಯಕ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು.

**14ಬಿ. 7ಎ ಪ್ರಕರಣದ ಅಡಿಯಲ್ಲಿ ಮೊಬಲಗಿನ ಘೋಷಣೆ.-** 7ಎ ಪ್ರಕರಣದ ಅಡಿಯಲ್ಲಿನ ಪ್ರತಿಯೊಂದು ಘೋಷಣೆ ನಮೂನೆ 3ಎ ಯಲ್ಲಿರತಕ್ಕದ್ದು.

**14ಸಿ. 7ಬಿ ಪ್ರಕರಣದ ಅಡಿಯಲ್ಲಿ ಆದೇಶದ ಬಗ್ಗೆ ತಿಳಿಸುವುದು.-** 7ಬಿ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನು ಮಾಡಿದ ಪ್ರತಿಯೊಂದು ಆದೇಶವನ್ನು ಲೈಸೆನ್ಸ್‌ದಾರನಿಗೆ ಖುದ್ದಾಗಿ ಅಥವಾ ಅವನ ಏಜೆಂಟನಿಗೆ ಅಥವಾ ಲೈಸೆನ್ಸ್‌ದಾರನ ವಾಸದ ಮನೆ ಅಥವಾ ವ್ಯವಹಾರದ ಸ್ಥಳ ಅಥವಾ ಕೊನೆಯದಾಗಿ ಇದ್ದನೆಂದು ತಿಳಿದು ಬಂದ ವಾಸಸ್ಥಳದ ಅಥವಾ ವ್ಯವಹಾರ ಸ್ಥಳದ ವಿಳಾಸಕ್ಕೆ ತಲುಪೊಪ್ಪಿಗೆ ಸಹಿತ ನೋಂದಾಯಿತ ಅಂಚೆಯ ಮೂಲಕ ತಿಳಿಸತಕ್ಕದ್ದು.

**14ಡಿ. ಮುಟ್ಟುಗೋಲು ಹಾಕಿಕೊಳ್ಳಲಾದ ಮೊಬಲಗಿನಿಂದ ಸಂದಾಯ.- (**1) ಒಬ್ಬ ಲೈಸೆನ್ಸುದಾರನ ಕೃತ್ಯಗಳಿಂದ ಬಾಧಿತನಾದ ಸಾಲಗಾರನು ಕ್ಲೇಮಿನ ಸ್ವರೂಪ ಮತ್ತು ಅಂಥ ಲೈಸೆನ್ಸುದಾರನಿಂದ ಬರಬೇಕಾದ ಮೊಬಲಗನ್ನು ನಿರ್ದಿಷ್ಟಪಡಿಸಿ ಒಂದು ಅರ್ಜಿಯನ್ನು ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕದ್ದು.

(2) (1) ನೇ ಉಪ ನಿಯಮದ ಅಡಿಯಲ್ಲಿ ರಿಜಿಸ್ಟ್ರಾರನು ಒಂದು ಅರ್ಜಿಯನ್ನು ಸ್ವೀಕರಿಸಿದ ಮೇಲೆ, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಮುಟ್ಟುಗೋಲು ಹಾಕಿಕೊಳ್ಳಲಾದ ಮೊಬಲಗಿನಿಂದ ಅರ್ಜಿದಾರನಿಗೆ ಸಂದಾಯವಾಗಬೇಕಾದ ಮೊಬಲಗನ್ನು ನಿರ್ಧರಿಸತಕ್ಕದ್ದು:

ಪರಂತು, ಒಬ್ಬರಿಗಿಂತ ಹೆಚ್ಚಿಗೆ ಅರ್ಜಿದಾರರಿದ್ದರೆ, ಅರ್ಜಿದಾರರಿಗೆ ಸಂದಾಯ ಮಾಡಬೇಕೆಂದು ನಿರ್ಧರಿಸಿದ ಮೊಬಲಗುಗಳ ದಾಮಾಷಾ ಅನುಸಾರವಾದ ದರಗಳಲ್ಲಿ ಸಂದಾಯ ಮಾಡತಕ್ಕದ್ದು.

14**ಇ. ಭದ್ರತಾ ಮೊಬಲಗಿನ ಮರುಪಾವತಿ.-** (1) ತನ್ನ ವ್ಯವಹಾರವನ್ನು ಸಮಾಪನಗೊಳಿಸಿದ ಅಥವಾ ತನ್ನ ಲೈಸೆನ್ಸಿನ ಅವಧಿಯು ಮುಕ್ತಾಯವಾದ ತರುವಾಯ ಒಂದು ಹೊಸ ಲೈಸೆನ್ಸಿಗಾಗಿ ಅರ್ಜಿ ಹಾಕದಿರುವ ಒಬ್ಬ ಲೈಸೆನ್ಸುದಾರನು, 7ಎ ಪ್ರಕರಣದ ಅಡಿಯಲ್ಲಿ ಠೇವಣಿ ಇಟ್ಟ ಮೊಬಲಗಿನ ಮರುಪಾವತಿಗಾಗಿ ರಿಜಿಸ್ಟ್ರಾರನಿಗೆ ಅರ್ಜಿ ಸಲ್ಲಿಸಬಹುದು.

(2) ರಿಜಿಸ್ಟ್ರಾರನು, (1) ನೇ ಉಪನಿಯಮದ ಅಡಿಯಲ್ಲಿನ ಒಂದು ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಲೈಸೆನ್ಸ್‌ದಾರನು ತನ್ನ ವ್ಯವಹಾರವನ್ನು ಸಮಾಪನಗೊಳಿಸಿದ್ದಾನೆಂದು ಅಥವಾ ಮುಂಬರುವ ವರ್ಷಕ್ಕೆ ಒಂದು ಹೊಸ ಲೈಸೆನ್ಸ್‌ಗಾಗಿ ಅರ್ಜಿ ಹಾಕಿಲ್ಲವೆಂಬ ಬಗ್ಗೆ ಮತ್ತು ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸಿರುವುದರ ಸಂಬಂಧದಲ್ಲಿ ಅವನ ವಿರುದ್ಧ ಯಾವುದೇ ಮೊಕದ್ದಮೆ ಇತ್ಯರ್ಥದಲ್ಲಿಲ್ಲವೆಂಬ ಬಗ್ಗೆ ಮನದಟ್ಟು ಮಾಡಿಕೊಂಡ ತರುವಾಯ, 7ಎ ಪ್ರಕರಣದ ಅಡಿಯಲ್ಲಿ ಠೇವಣಿಯಾಗಿಟ್ಟ ಮೊಬಲಗನ್ನು ಅಥವಾ 7 ಬಿ ಪ್ರಕರಣದ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ತರುವಾಯ ಅದರ ಬಾಕಿ ಯಾವುದಾದರೂ ಇದ್ದರೆ ಆ ಬಾಕಿ ಇರುವಷ್ಟು ಮೊಬಲಗನ್ನು ಮರು ಪಾವತಿ ಮಾಡುವಂತೆ ಆದೇಶಿಸಬಹುದು.][1]

**15. 20ನೇ ಪ್ರಕರಣದ ಅಡಿಯಲ್ಲಿನ ನಗದಿ ಪುಸ್ತಕ, ಲೆಡ್ಜರ್ ಮತ್ತು ವಿವರಪತ್ರದ ನಮೂನೆಗಳು.-** 20ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಲೇವಾದೇವಿದಾರನು ನಿರ್ವಹಿಸಬೇಕಾದ ನಗದಿ ಪುಸ್ತಕ ಮತ್ತು ಲೆಡ್ಜರ್ ಅನುಕ್ರಮವಾಗಿ 4 ಮತ್ತು 5ನೇ ನಮೂನೆಗಳಲ್ಲಾಗಲೀ ಅಥವಾ ಅನುಕ್ರಮವಾಗಿ 4 ಎ ಮತ್ತು 5 ಎ ನಮೂನೆಗಳಲ್ಲಾಗಲಿ ಇರತಕ್ಕದ್ದು. 20ನೇ ಪ್ರಕರಣದ (2)ನೇ ಉಪ ಪ್ರಕರಣದ (ಎ) ಖಂಡದ ಮೇರೆಗಿನ ವಿವರ ಪತ್ರವು ನಮೂನೆ 6 ರಲ್ಲಿರತಕ್ಕದ್ದು.

**16. 21ನೇ ಪ್ರಕರಣದ ಅಡಿಯಲ್ಲಿ ಲೇವಾದೇವಿದಾರನು ಸಾಲಗಾರ, ಮುಂತಾದವರಿಗೆ ತಲುಪಿಸಬೇಕಾದ ವಾರ್ಷಿಕ ಲೆಕ್ಕಪತ್ರಗಳ ವಿವರ ಪತ್ರ.-** (1) ಲೇವಾದೇವಿದಾರನು 21ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ತನ್ನ ಪ್ರತಿಯೊಬ್ಬ ಸಾಲಗಾರನಿಗೆ ಕಳುಹಿಸುವ ವಾರ್ಷಿಕ ಲೆಕ್ಕಪತ್ರಗಳ ವಿವರ ಪತ್ರವು ನಮೂನೆ 7 ರಲ್ಲಿರತಕ್ಕದ್ದು.

(2) ಲೇವಾದೇವಿದಾರರು ಸಾಮಾನ್ಯವಾಗಿ ನಿರ್ವಹಿಸುವಂಥ ಲೆಕ್ಕಪತ್ರಗಳ ವಿವರಪತ್ರವನ್ನು ವರ್ಷದ ಮುಕ್ತಾಯದ ನಂತರದ ಅರವತ್ತು ದಿನಗಳೊಳಗಾಗಿ ಪ್ರತಿಯೊಬ್ಬ ಸಾಲಗಾರನಿಗೂ ಒದಗಿಸತಕ್ಕದ್ದು:

ಪರಂತು, ರಿಜಿಸ್ಟ್ರಾರನು, ಲೇವಾದೇವಿದಾರನ ಅರ್ಜಿಯ ಮೇಲೆ ಸದರಿ ಅರವತ್ತು ದಿನಗಳೊಳಗಾಗಿ ಒಟ್ಟು ವಿವರಣ ಪತ್ರಗಳ ಮೂರನೇ ಎರಡಷ್ಟಕ್ಕೆ ಕಡಿಮೆ ಇಲ್ಲದಷ್ಟು ವಿವರಪತ್ರಗಳನ್ನು ಒದಗಿಸಲಾಗುವುದು ಎಂಬುದನ್ನು ಲೇವಾದೇವಿದಾರನು ರಿಜಿಸ್ಟ್ರಾರನಿಗೆ ಮನದಟ್ಟಾಗುವಂತೆ ರುಜುವಾತುಪಡಿಸಿದರೆ, ಅಂಥ ಅವಧಿಯನ್ನು ಅಂಥ ವರ್ಷವು ಮುಕ್ತಾಯವಾದ ನಂತರ ಒಟ್ಟಿನಲ್ಲಿ ತೊಂಬತ್ತು ದಿನಗಳಿಗಿಂತ ಹೆಚ್ಚಿಲ್ಲದ ಅವಧಿಗೆ ವಿಸ್ತರಿಸಬಹುದು.

(3) 21ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಲೆಕ್ಕದ ವಿವರಣ ಪತ್ರವನ್ನು ಒದಗಿಸಿದ್ದಕ್ಕಾಗಿ ಒಬ್ಬ ಸಾಲಗಾರನು ಒಬ್ಬ ಲೇವಾದೇವಿದಾರನಿಗೆ ಸಂದಾಯ ಮಾಡಬೇಕಾದ ಫೀಜು ಐವತ್ತು ಪೈಸೆಯಾಗಿರತಕ್ಕದ್ದು.

(4) 21ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿ ಒಬ್ಬ ಲೇವಾದೇವಿದಾರನು ಒಬ್ಬ ಸಾಲಗಾರನಿಗೆ ದಸ್ತಾವೇಜುಗಳ ಪ್ರತಿಗಳನ್ನು ಒದಗಿಸಿದ್ದಕ್ಕಾಗಿ ಅವನಿಂದ ವಸೂಲು ಮಾಡಬೇಕಾದ ಖರ್ಚುಗಳು ಈ ಮುಂದಿನ ಪ್ರಮಾಣಕ್ಕನುಗುಣವಾಗಿರತಕ್ಕದ್ದು,-

| | |
|---|---|
| 100 ಪದಗಳ ಅಥವಾ ಅವುಗಳ ಭಾಗದ ಪ್ರತಿ ತೆಗೆಯುವುದಕ್ಕಾಗಿ | 10 ಪೈಸೆ |
| ಕೋಷ್ಟಕ ರೂಪದಲ್ಲಿರುವ ವಿವರ ಪತ್ರದ 100 ಪದಗಳ ಅಥವಾ ಅವುಗಳ ಭಾಗದ ಪ್ರತಿ ತೆಗೆಯುವುದಕ್ಕಾಗಿ | 15 ಪೈಸೆ |

**17. ವಿವರಣ ಪತ್ರಗಳನ್ನು ಅಥವಾ ಪಾಸ್ ಬುಕ್ಕುಗಳನ್ನು ಒದಗಿಸುವುದಕ್ಕೆ ಫೀಜುಗಳು:-** (1) 22ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ವಸೂಲು ಮಾಡಬೇಕಾದ ಫೀಜುಗಳ ದರವು, (ಎ) 20ನೇ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 21ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಸರಬರಾಜು ಮಾಡಿದ ಪ್ರತಿಯೊಂದು ವಿವರಣಪತ್ರ ಅಥವಾ ಅದರ ಒಂದು ಪ್ರತಿಗೆ 15 ಪೈಸೆ ಮತ್ತು (ಬಿ) 20ನೇ ಪ್ರಕರಣದ (2)ನೇ ಉಪ ಪ್ರಕರಣ ಮತ್ತು 21ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ, ರಕ್ಷಾಪುಟಗಳನ್ನು ಹೊರತುಪಡಿಸಿ ಎಂಟು ಪುಟಗಳಿಗೆ ಕಡಿಮೆಯಿಲ್ಲದ ಪುಟಗಳನ್ನು ಒಳಗೊಂಡ ಪ್ರತಿಯೊಂದು ಪಾಸ್ ಬುಕ್ಕಿಗೆ 75 ಪೈಸೆ.

(2) ಅಂಥ ಫೀಜುಗಳ ಲೆಕ್ಕದ ಮೇಲಿನ ಮೊಬಲಗನ್ನು ಸಾಲಗಾರರ ಲೆಕ್ಕದಲ್ಲಿ ಪ್ರತ್ಯೇಕವಾಗಿ ತೋರಿಸತಕ್ಕದ್ದು.

**18. ಪಾಸ್ ಬುಕ್ಕಿನ ನಮೂನೆ.-** 20 ಮತ್ತು 21ನೇ ಪ್ರಕರಣಗಳಲ್ಲಿ ನಮೂದಿಸಲಾದ ಪಾಸ್ ಬುಕ್ 8 ನೇ ಅಥವಾ 9ನೇ ನಮೂನೆಯಲ್ಲಿರತಕ್ಕದ್ದು.

**19. ಸಾಲದ ಹಸ್ತಾಂತರಣದ ತರುವಾಯ ನೀಡಬೇಕಾದ ನೋಟೀಸು ಮತ್ತು ಮಾಹಿತಿ.-** 30ನೇ ಪ್ರಕರಣದ (1)ನೇ ಉಪ ಪ್ರಕರಣದ (ಎ) ಖಂಡದ ಅಡಿಯಲ್ಲಿ ಒಬ್ಬ ಹಸ್ತಾಂತರ ಪಡೆದವನಿಗೆ ನೀಡಬೇಕಾದ ನೋಟೀಸು, (ಬಿ) ಖಂಡದ ಅಡಿಯಲ್ಲಿ ಒಬ್ಬ ಹಸ್ತಾಂತರ ಪಡೆದವನಿಗೆ ಒದಗಿಸಬೇಕಾದ ಮಾಹಿತಿಯ ವಿವರಣಪತ್ರ ಮತ್ತು (ಸಿ) ಖಂಡದ ಅಡಿಯಲ್ಲಿ ಒಬ್ಬ ಸಾಲಗಾರನಿಗೆ ನೀಡಬೇಕಾದ ನೋಟೀಸು ಅನುಕ್ರಮವಾಗಿ ನಮೂನೆ 10, 11 ಮತ್ತು 12 - ಇವುಗಳಲ್ಲಿ ಇರತಕ್ಕದ್ದು.

**20. 33ನೇ ಪ್ರಕರಣದ ಅಡಿಯಲ್ಲಿನ ಅರ್ಜಿ ನಮೂನೆ.-** 33ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಒಬ್ಬ ಸಾಲಗಾರನು ಸಲ್ಲಿಸುವ ಅರ್ಜಿಯು ನಮೂನೆ 13ರಲ್ಲಿರತಕ್ಕದ್ದು ಮತ್ತು ಅದರೊಂದಿಗೆ ಒಂದು ರೂಪಾಯಿ ನ್ಯಾಯಾಲಯ ಫೀಜಿನ ರಸೀದಿ ಇರತಕ್ಕದ್ದು.

**21. ಫೀಜುಗಳನ್ನು ಸಂದಾಯ ಮಾಡಿದ ತರುವಾಯ ದಸ್ತಾವೇಜುಗಳ ಪ್ರತಿಗಳ ನೀಡಿಕೆ:-** (1) ಅಧಿನಿಯಮದ ಅಡಿಯಲ್ಲಿ ಸಹಾಯಕ ರಿಜಿಸ್ಟ್ರಾರ್, ರಿಜಿಸ್ಟ್ರಾರ್ ಅಥವಾ ರಿಜಿಸ್ಟ್ರಾರ್ ಜನರಲ್ಲನ ಮುಂದಿರುವ ಯಾವುದೇ ಅರ್ಜಿ, ವಿಚಾರಣೆ ಅಥವಾ ಅಪೀಲಿನ ಯಾರೇ ಪಕ್ಷಕಾರನು ಅಥವಾ ಅಂಥ ಅರ್ಜಿ, ವಿಚಾರಣೆ ಅಥವಾ ಅಪೀಲಿನಲ್ಲಿ ಹಿತಾಸಕ್ತಿಯುಳ್ಳ ಯಾರೇ ವ್ಯಕ್ತಿಯು, ಅಂಥ ಅರ್ಜಿ, ವಿಚಾರಣೆ ಅಥವಾ ಅಪೀಲಿನ ಯಾವುದೇ ದಸ್ತಾವೇಜಿನಲ್ಲಿನ ಯಾವುದೇ ಪ್ರತಿಯನ್ನು ಕೋರಿ ಸಹಾಯಕ ರಿಜಿಸ್ಟ್ರಾರ್, ರಿಜಿಸ್ಟ್ರಾರ್ ಅಥವಾ ಸಂದರ್ಭಾನುಸಾರ ರಿಜಿಸ್ಟ್ರಾರ್ ಜನರಲ್ಲನಿಗೆ ಅರ್ಜಿ ಸಲ್ಲಿಸಬಹುದು.

(2) ನಕಲುಗಳನ್ನು ಸಿದ್ಧಪಡಿಸುವ ವೆಚ್ಚವನ್ನು ಒಳಗೊಳ್ಳುವಂತೆ ನಕಲು ಫೀಜು ಈ ಕೆಳಕಂಡ ಪ್ರಮಾಣಗಳಿಗನುಸಾರವಾಗಿ ಠೇವಣಿ ಅಥವಾ ಒಂದು ಮೊಬಲಗು ಅರ್ಜಿಯ ಜೊತೆಯಲ್ಲಿರತಕ್ಕದ್ದು, ಎಂದರೆ:-

(ಎ) ಇಂಗ್ಲೀಷ್ ಪ್ರತಿಗಳ ಸಂದರ್ಭದಲ್ಲಿ, ಪ್ರತಿ 25 ಪದಗಳು ಅಥವಾ ಅವುಗಳ ಭಾಗಕ್ಕೆ 5 ಪೈಸೆ;

(ಬಿ) ಪ್ರಾದೇಶಿಕ ಭಾಷೆಗಳ ಪ್ರತಿಗಳ ಸಂದರ್ಭದಲ್ಲಿ, ಪ್ರತಿ 30 ಪದಗಳಿಗೆ ಅಥವಾ ಅವುಗಳ ಭಾಗಕ್ಕೆ 5 ಪೈಸೆ;

(ಸಿ) ಪ್ರಮಾಣೀಕೃತ ಪ್ರತಿಗಳ ಸಂದರ್ಭದಲ್ಲಿ, ತಾಳೆ ನೋಡುವುದಕ್ಕೆ 100 ಪದಗಳು ಅಥವಾ ಅದರ ಭಾಗಕ್ಕೆ ಹೆಚ್ಚಿನ 5 ಪೈಸೆ;

(ಡಿ) ಕೋಷ್ಟಕದ ನಮೂನೆಗಳಲ್ಲಿರುವ ದಸ್ತಾವೇಜುಗಳ ಸಂದರ್ಭದಲ್ಲಿ, ಸಾಮಾನ್ಯ ದರದ ಎರಡರಷ್ಟು; ಆದರೆ, ಎಲ್ಲ ನಕಲು ಮಾಡುವ, ತಾಳೆ ನೋಡುವ ಮತ್ತು ಭಾಷಾಂತರಿಸುವ ಕಾರ್ಯಗಳಿಗಾಗಿ ಶೇ 55 ರಷ್ಟು ಅಧಿಕ ಕರವನ್ನು ವಿಧಿಸತಕ್ಕದ್ದು ಮತ್ತು ಪ್ರಮಾಣೀಕೃತ ಪ್ರತಿಗಳನ್ನು ಸಿದ್ಧಪಡಿಸುವುದಕ್ಕಾಗಿ ಒಟ್ಟು ವೆಚ್ಚಗಳಿಗೆ ಅದನ್ನು ಸೇರಿಸತಕ್ಕದ್ದು;

(ಇ) ಅರ್ಜಿಯಲ್ಲಿ ಕೊಟ್ಟಿರುವ ದಸ್ತಾವೇಜಿನ ವಿವರಣೆಯು ತಪ್ಪಾಗಿದ್ದಾಗ ಅಥವಾ ಅಪೂರ್ಣವಾಗಿದ್ದಾಗ, ಅದರ ಪರಿಣಾಮವಾಗಿ ಅದನ್ನು ಕಂಡುಹಿಡಿಯಲು ಅವನ ದಾಖಲೆಗಳನ್ನು ರಿಕಾರ್ಡ್‌ಕೀಪರನು ಅಗತ್ಯವಾಗಿ ಶೋಧಿಸಬೇಕಾಗುವ ಕಾರಣದಿಂದಾಗಿ ದಸ್ತಾವೇಜು ಕಂಡುಬರಲಿ ಅಥವಾ ಇಲ್ಲದಿರಲಿ ಮತ್ತು ಸದರಿ ದಸ್ತಾವೇಜಿನ ಪರಿಶೀಲನೆಯ ತರುವಾಯ ಅವನು ಅರ್ಜಿಯಲ್ಲಿ ಕೋರಿದ್ದ ಪ್ರತಿಯನ್ನು ನೀಡಿರಲಿ ಅಥವಾ ನೀಡದಿರಲಿ, ಯಾವ ವರ್ಷಕ್ಕಾಗಿ ದಾಖಲೆಗಳನ್ನು ಶೋಧಿಸಲಾಯಿತೋ ಆ ಪ್ರತಿಯೊಂದು ವರ್ಷಕ್ಕೆ ಒಂದು ರೂಪಾಯಿ ದರದಲ್ಲಿ ಫೀಜನ್ನು ಅಂಥ ಶೋಧನೆಗಾಗಿ ಅರ್ಜಿದಾರನು ಸಂದಾಯಮಾಡತಕ್ಕದ್ದು.

(3) ಪ್ರತಿ ಮಾಡುವ ಫೀಜು ಆಗಿ, ಮೇಲಿನ ಪ್ರಮಾಣಕ್ಕನುಸಾರವಾಗಿ ಲೆಕ್ಕ ಹಾಕಲಾದ ಮೊಬಲಗನ್ನು, ಪ್ರತಿಗಳನ್ನು ಮಂಜೂರು ಮಾಡಲು ಯಾರಿಗೆ ಅರ್ಜಿ ಸಲ್ಲಿಸಲಾಗಿತ್ತೋ ಆ ಸಹಾಯಕ ರಿಜಿಸ್ಟ್ರಾರ್, ರಿಜಿಸ್ಟ್ರಾರ್ ಅಥವಾ ರಿಜಿಸ್ಟ್ರಾರ್ ಜನರಲ್ಲನು ಸರ್ಕಾರಕ್ಕೆ ಜಮೆ ಮಾಡತಕ್ಕದ್ದು ಮತ್ತು ಪ್ರತಿಗಳಿಗಾಗಿ ಅರ್ಜಿ ಸಲ್ಲಿಸುವ ವ್ಯಕ್ತಿಯು ಹೆಚ್ಚುವರಿ ಮೊಬಲಗೇನಾದರೂ ಠೇವಣಿ ಇಟ್ಟಿದ್ದರೆ, ಪ್ರತಿಗಳನ್ನು ಒದಗಿಸುವ ಸಮಯದಲ್ಲಿ ಅದನ್ನು ಅವನಿಗೆ ಮರುಪಾವತಿ ಮಾಡತಕ್ಕದ್ದು; ಆದರೆ, ಪ್ರತಿಗಳಿಗಾಗಿ ಅರ್ಜಿ ಸಲ್ಲಿಸುವ ವ್ಯಕ್ತಿಯು ಠೇವಣಿ ಇಟ್ಟ ಮೊಬಲಗು ಪ್ರತಿಗಳನ್ನು ಮಾಡುವ ಸಂಬಂಧದ ಫೀಜನ್ನು ಒಳಗೊಳ್ಳಲು ಸಾಕಾಗುವಷ್ಟು ಇಲ್ಲದಿದ್ದರೆ, ಅವನು ಪ್ರತಿಯನ್ನು ತೆಗೆದುಕೊಂಡು ಹೋಗುವುದಕ್ಕೆ ಮುಂಚೆ ಕಡಿಮೆಬಿದ್ದ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

**22. ಸಮನುಗಳ ನಮೂನೆಗಳು.-** 7ನೇ ಪ್ರಕರಣದ ಅಡಿಯಲ್ಲಿನ ವಿಚಾರಣೆಗೆ ಸಂಬಂಧಿಸಿದಂತೆ 14 ನೇ ಪ್ರಕರಣದ ಅಡಿಯಲ್ಲಿ ಯಾರೇ ವ್ಯಕ್ತಿಯ ಹಾಜರಾತಿಯನ್ನು ಒತ್ತಾಯಿಸಲು ಜಾರಿ ಮಾಡಬೇಕಾದ ಸಮನುಗಳ ನಮೂನೆ 14 ಅಥವಾ ಸಂದರ್ಭಾನುಸಾರ ನಮೂನೆ 15ರಲ್ಲಿರತಕ್ಕದ್ದು.

## ನಮೂನೆ - 1

[3ನೇ ನಿಯಮವನ್ನು ನೋಡಿ]

**ಲೇವಾದೇವಿದಾರನ ರಿಜಿಸ್ಟರ್**

**ಸಹಾಯಕ ರಿಜಿಸ್ಟ್ರಾರ್ ರವರ ಕಚೇರಿ . . . . . . ತಾಲ್ಲೂಕು. . . . . . . ಜಿಲ್ಲೆ**

| ಕ್ರಮ ಸಂಖ್ಯೆ | *ಲೇವಾದೇವಿ ದಾರನ ಹೆಸರು, ತಂದೆಯ ಅಥವಾ ಗಂಡನ ಹೆಸರು ಮತ್ತು ಲೇವಾದೇವಿದಾರನ ಪೂರ್ಣ ವಿಳಾಸ | ವ್ಯವಹಾರದ ವ್ಯವಸ್ಥಾಪನೆಗೆ ಜವಾಬ್ದಾರನಾದ ವ್ಯಕ್ತಿ ಅಥವಾ ವ್ಯಕ್ತಿಗಳು ಯಾರೇ ಇದ್ದರೆ, ಅವರ ಹೆಸರು, ತಂದೆಯ ಹೆಸರು ಮತ್ತು ಪೂರ್ಣ ವಿಳಾಸ | ಪ್ರಧಾನ ವ್ಯವಹಾರದ ಅಥವಾ ಅದರ ಶಾಖೆಗಳ ಪೂರ್ಣ ವಿವರಗಳು | ಹಿಂದಿನ ಲೈಸೆನ್ಸು ಯಾವುದೇ ಇದ್ದರೆ, ಅದರ ದಿನಾಂಕ ಮತ್ತು ಕ್ರಮಸಂಖ್ಯೆ | ಪ್ರಸ್ತುತ ನೀಡಿದ ದಿನಾಂಕ |
|---|---|---|---|---|---|
| (1) | (2) | (2)(ಎ) | (3) | (4) | (5) |
| | | | | | |

| ಅರ್ಜಿಯ ಕ್ರಮಸಂಖ್ಯೆ | **ಯಾವುದೇ ಲೈಸೆನ್ಸ್ ರದ್ದಾಗಿದ್ದರೆ ಅದರ ದಿನಾಂಕ ಮತ್ತು ವಿವರಗಳು | ಅಪೀಲು ಪ್ರಾಧಿಕಾರದ ಆದೇಶಗಳು, ಯಾವುವಾದರೂ ಇದ್ದರೆ ಆ ಆದೇಶ | 14 (ii) (ಎ) ಪ್ರಕರಣದ ಅಡಿಯಲ್ಲಿ ರದ್ದಾದ ಅಥವಾ 14(ii) (ಎಚ್) ಪ್ರಕರಣದ ಅಡಿಯಲ್ಲಿ ಅನರ್ಹಗೊಂಡ ಲೈಸೆನ್ಸಿನ ವಿವರಗಳು | ನೀಡಲಾದ ದ್ವಿಪ್ರತಿ ಲೈಸೆನ್ಸುಗಳ ಸಂಖ್ಯೆ ಮತ್ತು ದಿನಾಂಕ | ಸಹಾಯಕ ರಿಜಿಸ್ಟ್ರಾರನ ಸಹಿ | ಷರಾ |
|---|---|---|---|---|---|---|
| (6) | (7) | (8) | (9) | (10) | (11) | (12) |
| | | | | | | |

* ಹಿಂದೂ ಅವಿಭಕ್ತ ಕುಟುಂಬವಾಗಿದ್ದಲ್ಲಿ, ಅಂಕಣ 2 ರಲ್ಲಿ ಅಂಥ ಕುಟುಂಬದ ವ್ಯವಸ್ಥಾಪಕನ ಮತ್ತು ವಯಸ್ಕ ದಾಯಾದಿಗಳ ಹೆಸರುಗಳು ಮತ್ತು ಅವರ ವಿಳಾಸಗಳನ್ನು ತೋರಿಸತಕ್ಕದ್ದು ; ಬ್ಯಾಂಕ್ ಅಥವಾ ಕಂಪನಿಯಾಗಿದ್ದಲ್ಲಿ 2ನೇ ಅಂಕಣದಲ್ಲಿ ಅದರ ನಿರ್ದೇಶಕನ ಮತ್ತು ವ್ಯವಸ್ಥಾಪಕನ ಅಥವಾ ಪ್ರಧಾನ ಅಧಿಕಾರಿಯ ಹೆಸರುಗಳು ಮತ್ತು ವಿಳಾಸಗಳನ್ನು ಮತ್ತು ವ್ಯಕ್ತಿಗಳ ನಿಗಮಿತವಲ್ಲದ ನಿಕಾಯವಾಗಿದ್ದಲ್ಲಿ, ಆ ಎಲ್ಲ ವ್ಯಕ್ತಿಗಳ ಹೆಸರುಗಳು ಮತ್ತು ವಿಳಾಸಗಳನ್ನು ತೋರಿಸತಕ್ಕದ್ದು.

** ಈ ಅಂಕಣವನ್ನು ಭರ್ತಿ ಮಾಡುವಾಗ, ಅಧಿನಿಯಮದ ಯಾವ ಪ್ರಕರಣದ ಅಡಿಯಲ್ಲಿ ರದ್ದು ಮಾಡಲಾಗಿದೆ ಎಂಬುದನ್ನು ನಮೂದಿಸಬೇಕು.

## ನಮೂನೆ 2

**[5ನೇ ನಿಯಮವನ್ನು ನೋಡಿ]**

**ಲೈಸೆನ್ಸ್ ನೀಡಿಕೆಗೆ ಲೇವಾದೇವಿದಾರನ ಅರ್ಜಿ**

. . . . . . . . . . . . .ಸಹಾಯಕ ರಿಜಿಸ್ಟ್ರಾರರ ಕಚೇರಿ.

. . . . . . . . . . . ಅಂಚೆ

. . . . . . . . . . . ತಾಲ್ಲೂಕು

. . . . .. . . . . . ಜಿಲ್ಲೆ

1. ಅರ್ಜಿದಾರನ ಹೆಸರು, ತಂದೆ ಅಥವಾ ಗಂಡನ ಹೆಸರು, ಅಡ್ಡ ಹೆಸರು, ವಾಸಸ್ಥಳ ಮತ್ತು ಪೂರ್ಣ ವಿಳಾಸ.

ಹಿಂದೂ ಅವಿಭಕ್ತ ಕುಟುಂಬದ ವ್ಯವಸ್ಥಾಪಕನ ಮತ್ತು ವಯಸ್ಕ ದಾಯಾದಿಗಳ ಹೆಸರು, ಅವರ ತಂದೆಯ ಹೆಸರು, ಅಡ್ಡ ಹೆಸರು, ವಾಸಸ್ಥಳ ಮತ್ತು ಪೂರ್ಣ ವಿಳಾಸ.

ಬ್ಯಾಂಕ್ ಅಥವಾ ಕಂಪನಿಯ ಆಡಳಿತವನ್ನು ನಿರ್ವಹಿಸುವ ನಿರ್ದೇಶಕ, ವ್ಯವಸ್ಥಾಪಕ ಅಥವಾ ಪ್ರಧಾನ ಅಧಿಕಾರಿಯ ಹೆಸರು ಹಾಗೂ ಅವರ ತಂದೆ ಅಥವಾ ಗಂಡನ ಹೆಸರು, ಅಡ್ಡ ಹೆಸರು, ವಾಸಸ್ಥಳ ಮತ್ತು ಪೂರ್ಣ ವಿಳಾಸ.

ನಿಗಮಿತವಲ್ಲದ ನಿಕಾಯದ ಎಲ್ಲ ವ್ಯಕ್ತಿಗಳ ಹೆಸರು ಹಾಗೂ ಅವರ ತಂದೆ ಅಥವಾ ಗಂಡನ ಹೆಸರು, ಅಡ್ಡ ಹೆಸರು, ವಾಸಸ್ಥಳ ಮತ್ತು ಪೂರ್ಣ ವಿಳಾಸ.

2. ಅರ್ಜಿದಾರನು ನಡೆಸುತ್ತಿರುವ ಅಥವಾ ನಡೆಸಲು ಉದ್ದೇಶಿಸಿರುವ ಲೇವಾದೇವಿ ವ್ಯವಹಾರದ ಹೆಸರು.

3. ಅರ್ಜಿಯ ದಿನಾಂಕದಂದು ಅರ್ಜಿದಾರನು ತನ್ನ ಲೇವಾದೇವಿ ವ್ಯವಹಾರವನ್ನು ನಡೆಸುತ್ತಿರುವ ಪ್ರದೇಶದ ಹೆಸರು.

4. ಅರ್ಜಿದಾರನ ಲೇವಾದೇವಿ ವ್ಯವಹಾರದ ವ್ಯವಸ್ಥಾಪನೆಗೆ ಜವಾಬ್ದಾರರಾದ ಅಥವಾ ಜವಾಬ್ದಾರರಾಗಿರಲು ಉದ್ದೇಶಿಸಿದ ವ್ಯಕ್ತಿಗಳ ಹೆಸರು ಹಾಗೂ ಅವರ ತಂದೆಯ ಅಥವಾ ಗಂಡನ ಹೆಸರು, ಅಡ್ಡ ಹೆಸರು, ವಾಸಸ್ಥಳ ಮತ್ತು ಪೂರ್ಣ ವಿಳಾಸ.

5. ಅರ್ಜಿದಾರನ ವ್ಯವಹಾರದ ಸ್ಥಳ ಅಥವಾ ವ್ಯವಹಾರದ ಪ್ರಧಾನ ಸ್ಥಳ ಹಾಗೂ ಅವುಗಳ ಪೂರ್ಣ ವಿವರಗಳು ಮತ್ತು ಪ್ರಭಾರದಲ್ಲಿನ ವ್ಯಕ್ತಿಯ ಹೆಸರು, ತಂದೆ ಅಥವಾ ಗಂಡನ ಹೆಸರು, ಅಡ್ಡ ಹೆಸರು ಮತ್ತು ವಿಳಾಸ.

6. ಅರ್ಜಿಗೆ ಸಹಿ ಮಾಡುವ ವ್ಯಕ್ತಿಯು ಅಥವಾ ಯಾರ ಪರವಾಗಿ ಅರ್ಜಿ ಸಲ್ಲಿಸಲಾಗಿದೆಯೋ ಆ ಹಿಂದೂ ಅವಿಭಕ್ತ ಕುಟುಂಬದ ಯಾರೇ ವಯಸ್ಕ ದಾಯಾದಿಯು ಅಥವಾ ಬ್ಯಾಂಕಿನ ಅಥವಾ ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ ಅಥವಾ ಪ್ರಧಾನ ಅಧಿಕಾರಿಯು ಅಥವಾ ಸಂದರ್ಭಾನುಸಾರ ಆ ನಿಗಮಿತವಲ್ಲದ ನಿಕಾಯದ ಯಾರೇ ಸದಸ್ಯನು, ಅರ್ಜಿಯ ದಿನಾಂಕದ ನಿಕಟ ಪೂರ್ವದ ಮಾರ್ಚ್ 31 ರಂದು ಕೊನೆಗೊಳ್ಳುವ ವರ್ಷದಲ್ಲಿ, ಆ ಪ್ರದೇಶದಲ್ಲಿ ತಾನೇ ಪ್ರತ್ಯೇಕವಾಗಿ ಅಥವಾ ಯಾರೇ ದಾಯಾದಿಯೊಂದಿಗೆ ಅಥವಾ ಯಾರೇ ಇತರ ವ್ಯಕ್ತಿಯೊಂದಿಗೆ ಪಾಲುದಾರಿಕೆಯಲ್ಲಿ ಅಥವಾ ಜಂಟಿಯಾಗಿ ಮತ್ತು ಅದೇ ಹೆಸರಿನಲ್ಲಿ ಅಥವಾ ಯಾವುದೇ ಇತರ ಹೆಸರಿನಲ್ಲಿ ಲೇವಾದೇವಿ ವ್ಯವಹಾರವನ್ನು ನಡೆಸುತ್ತಿದ್ದಾನೆಯೇ?

7. ಅರ್ಜಿದಾರನು ಅಥವಾ ಅರ್ಜಿಯನ್ನು ಯಾರ ಪರವಾಗಿ ಸಲ್ಲಿಸಲಾಗಿದೆಯೋ ಆ ಯಾರೇ ಇತರ ವ್ಯಕ್ತಿಯು ಲೇವಾದೇವಿ ವ್ಯವಹಾರವನ್ನು ಆ ಪ್ರದೇಶದ ಇತರ ಯಾವುದೇ ಸ್ಥಳದಲ್ಲಿ ನಡೆಸುತ್ತಿರುವನೇ? ಅಥವಾ ನಡೆಸಲು ಉದ್ದೇಶಿಸಿರುವನೇ? ಹಾಗಿದ್ದಲ್ಲಿ, ಅಂಥ ಕಚೇರಿಯ ಪ್ರಭಾರದಲ್ಲಿರುವ ವ್ಯಕ್ತಿಯ ಹೆಸರು, ತಂದೆ ಅಥವಾ ಗಂಡನ ಹೆಸರು, ಅಡ್ಡ ಹೆಸರು ಮತ್ತು ವಿಳಾಸದೊಂದಿಗೆ ಇತರೆ ಪೂರ್ಣ ವಿವರಗಳನ್ನು ನೀಡಬೇಕು. ಅಂಥ ಪ್ರತಿಯೊಂದು ಕಚೇರಿ ಇರುವ ಸ್ಥಳದ ಮತ್ತು ಯಾವ ಪ್ರದೇಶದಲ್ಲಿ ಆ ಲೇವಾದೇವಿ ವ್ಯವಹಾರವನ್ನು ನಡೆಸಲಾಗುತ್ತಿದೆಯೋ ಅಥವಾ ನಡೆಸಲು ಉದ್ದೇಶಿಸಲಾಗಿದೆಯೋ ಆ ಪ್ರದೇಶದ ವಿವರಗಳನ್ನು ನೀಡಬೇಕು.

8. ಮಾರ್ಚ್ 31 ರಂದು ಅರ್ಜಿದಾರನ ಒಟ್ಟು ವ್ಯವಹಾರದ ವ್ಯಾಪ್ತಿ ಎಷ್ಟು?

9. ಅರ್ಜಿದಾರನು ಯಾವ ವರ್ಷಕ್ಕಾಗಿ ಅರ್ಜಿ ಸಲ್ಲಿಸಿರುವನೋ ಆ ವರ್ಷದಲ್ಲಿ ಲೇವಾದೇವಿ ವ್ಯವಹಾರದಲ್ಲಿ ತೊಡಗಿಸಲು ಉದ್ದೇಶಿಸಿರುವ ಬಂಡವಾಳದ ಒಟ್ಟು ಮೊಬಲಗು ಎಷ್ಟು?

9ಎ. ಅರ್ಜಿದಾರನ ಲೆಕ್ಕಗಳನ್ನು ಯಾವ ವರ್ಷಕ್ಕಾಗಿ ಇಟ್ಟುಕೊಂಡು ಬರಲಾಗಿದೆ?

10. ಅರ್ಜಿದಾರನು ಈ ಹಿಂದೆ ಲೇವಾದೇವಿ ವ್ಯವಹಾರವನ್ನು ನಡೆಸಿದ್ದನೆ? ನಡೆಸಿದ್ದರೆ ಯಾವಾಗಿನಿಂದ?

11. ಲೈಸೆನ್ಸಿಗಾಗಿ ಈ ಹಿಂದೆ ಯಾವುದೇ ಅರ್ಜಿ ಸಲ್ಲಿಸಲಾಗಿತ್ತೆ? ಸಲ್ಲಿಸಿದ್ದರೆ ಯಾವಾಗ, ಎಲ್ಲಿ ಮತ್ತು ಅದರ ಫಲಿತಾಂಶವೇನು?

12. ಈ ಹಿಂದಿನ ಅರ್ಜಿಗೆ ಲೈಸೆನ್ಸ್ ಮಂಜೂರಾಗಿದ್ದಲ್ಲಿ, ಲೈಸೆನ್ಸಿನ ಪೂರ್ಣ ವಿವರಗಳನ್ನು ನೀಡಿ.

13. ಅರ್ಜಿದಾರನಿಗೆ ಈ ಹಿಂದೆ ಮಂಜೂರು ಮಾಡಲಾಗಿದ್ದ ಯಾವುದೇ ಲೈಸೆನ್ಸನ್ನು ರದ್ದು ಪಡಿಸಲಾಗಿತ್ತೇ ಅಥವಾ ಅಮಾನತ್ತುಗೊಳಿಸಲಾಗಿತ್ತೇ ಅಥವಾ ಅದು ನ್ಯಾಯಾಲಯದ ಯಾವುವೇ ಹಿಂಬರಹಗಳನ್ನು ಒಳಗೊಂಡಿದೆಯೆ? ಅಥವಾ ನ್ಯಾಯಾಲಯವು ಯಾವುವಾದರೂ ಅನರ್ಹತೆಗಳನ್ನು ವಿಧಿಸಿದೆಯೆ? ಹಾಗಿದ್ದರೆ, ಅಧಿಕಾರಿಯ ಮತ್ತು/ಅಥವಾ ನ್ಯಾಯಾಲಯದ ಹೆಸರನ್ನು ಮತ್ತು ಆದೇಶದ ದಿನಾಂಕ ಹಾಗೂ ಅದರ ನಿಬಂಧನೆಗಳನ್ನೊಳಗೊಂಡ ಪೂರ್ಣ ವಿವರಗಳನ್ನು ನೀಡಬೇಕು.

14. ಲೇವಾದೇವಿ ವ್ಯವಹಾರವು ಅರ್ಜಿದಾರನ ಏಕ ಮಾತ್ರ ವ್ಯವಹಾರವಾಗಿದೆಯೆ? ಅಥವಾ ಅವನು ಇತರ ಯಾವುದೇ ವ್ಯವಹಾರ, ವೃತ್ತಿ ಅಥವಾ ಉದ್ಯೋಗದಲ್ಲಿ ತೊಡಗಿರುವನೆ?

15. (i) ಅರ್ಜಿದಾರನು, ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರದ ಉದ್ಯೋಗದಲ್ಲಿ ಪೂರ್ಣಕಾಲಿಕ ನೌಕರನಾಗಿದ್ದಾನೆಯೇ? ಹಾಗಿದ್ದರೆ ಅವನು ಹೊಂದಿರುವ ಹುದ್ದೆಯ ಪದನಾಮವನ್ನು ತಿಳಿಸುವುದು; ಮತ್ತು

(ii) ಅವನಿಗೆ ಅನ್ವಯವಾಗುವ ಲೇವಾದೇವಿ ವ್ಯವಹಾರ ಸಂಬಂಧಪಟ್ಟ ನಿಯಮಗಳ ಮೂಲಕ ಅವನು ಆ ಲೇವಾದೇವಿ ವ್ಯವಹಾರವನ್ನು ಪ್ರಾರಂಭಿಸಲು ಅಥವಾ ನಡೆಸಲು ಹಕ್ಕುಳ್ಳವನಾಗಿರುವನೆ?

. . . . . . . . . ಪ್ಯಾರಾಗಳನ್ನು ಹೊರತುಪಡಿಸಿ ಅರ್ಜಿಯಲ್ಲಿ ನಿರೂಪಿಸಲಾದ ಎಲ್ಲ ಸಂಗತಿಗಳು ನನ್ನ ತಿಳುವಳಿಕೆಯ ಮಟ್ಟಿಗೆ ಸತ್ಯವಾದವು ಮತ್ತು ಅವು . . . . . . . ಇವರಿಂದ ಒದಗಿಸಲಾದ ಮಾಹಿತಿಯನ್ನು ಆಧರಿಸಿದ್ದು ನಾನು ನಂಬಿರುವಷ್ಟರ ಮಟ್ಟಿಗೆ ನಿಜವಾದವುಗಳೆಂದು ಪ್ರಮಾಣೀಕರಿಸಲಾಗಿದೆ.

ಅರ್ಜಿದಾರನ ಸಹಿ ಹಾಗೂ ದಿನಾಂಕ

## ನಮೂನೆ 3

[9ನೇ ನಿಯಮವನ್ನು ನೋಡಿ]

## ಲೇವಾದೇವಿದಾರನ ಲೈಸೆನ್ಸ್

........................................... ಜಿಲ್ಲೆ

........................................... ತಾಲ್ಲೂಕು

........................................... ಸ್ಥಳ

........................................... ಅಂಚೆ

ಲೈಸೆನ್ಸ್ ಸಂಖ್ಯೆ ..........................................

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಮತ್ತು ಈ ಮುಂದಿನ ಷರತ್ತುಗಳಿಗೊಳಪಟ್ಟು ಲೇವಾದೇವಿ ವ್ಯವಹಾರವನ್ನು ನಡೆಸಲು . . . . . . ಇವರಿಗೆ ಈ ಲೈಸೆನ್ಸನ್ನು ನೀಡಲಾಗಿದೆ, ಎಂದರೆ:-

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(1) ಈ ಲೈಸೆನ್ಸ್ 31 ಜುಲೈ . . . . . . ರವರೆಗೆ ಸಿಂಧುವಾಗಿರತಕ್ಕದ್ದು.

(2) *. . . . . . ಇಲ್ಲಿ ಲೇವಾದೇವಿದಾರನು ತನ್ನ ಲೇವಾದೇವಿ ವ್ಯವಹಾರವನ್ನು ನಡೆಸಲು ಹಕ್ಕುಳ್ಳವನನ್ನಾಗಿಸತಕ್ಕದ್ದು.

(3) ಲೈಸೆನ್ಸನ್ನು ನೀಡುವ ರಿಜಿಸ್ಟ್ರಾರ್ ಅಥವಾ ರಿಜಿಸ್ಟ್ರಾರ್ ಜನರಲ್ ಅಥವಾ ನ್ಯಾಯಾಲಯವು ಲೈಸೆನ್ಸನ್ನು ಹಿಂದಿರುಗಿಸಬೇಕೆಂದು ಆದೇಶ ಮಾಡಿದಾಗ ಅದನ್ನು ಹಾಗೆ ಹಿಂದಿರುಗಿಸತಕ್ಕದ್ದು.

(ರಿಜಿಸ್ಟ್ರಾರನ ಮೊಹರು) ದಿನಾಂಕ ರಿಜಿಸ್ಟ್ರಾರ್.

*ಇಲ್ಲಿ ಪ್ರದೇಶವನ್ನು ನಮೂದಿಸಿ

(ಹಿಂಬದಿ)

ಹಿಂಬರಹ, ಯಾವುದಾದರೂ ಇದ್ದರೆ, ಸಹಿ ಷರಾ.

**ನಮೂನೆ-4**

[15ನೇ ನಿಯಮವನ್ನು ನೋಡಿ]

**ನಗದಿ ಪುಸ್ತಕ**

| **ಡಿಆರ್** | | **ಸ್ವೀಕೃತಿಗಳು** | | **ಬಟವಾಡೆ** | | | **ಸಿಆರ್** |
|---|---|---|---|---|---|---|---|
| ದಿನಾಂಕ | ವಿವರಗಳು | ಲೆಡ್ಜರ್ | ಮೊಬಲಗು<br>ಪುಟ<br>ರೂ.ಪೈ ರೂ.ಪೈ | ದಿನಾಂಕ | ವಿವರಗಳು | ಲೆಡ್ಜರ್<br>ಪುಟ | ಮೊಬಲಗು<br><br>ರೂ.ಪೈ ರೂ.ಪೈ |

**ನಮೂನೆ-4-ಎ**

[15ನೇ ನಿಯಮವನ್ನು ನೋಡಿ]

**ನಗದಿ ಪುಸ್ತಕ**

| **ದಿನಾಂಕ** | **ಸಾಲಕೊಟ್ಟವನು** | **ಸಾಲಗಾರ** | |
|---|---|---|---|
| ಮೊಬಲಗು | ವಿವರಗಳು | ಮೊಬಲಗು | ವಿವರಗಳು |
| ಪ್ರಾರಂಭ ಶಿಲ್ಕನ್ನು<br>ಮುಂದಕ್ಕೆ ತರಲಾಗಿದೆ<br>ಮುಕ್ತಾಯ ಶಿಲ್ಕನ್ನು<br>ಮುಂದಕ್ಕೆ ತರಲಾಗಿದೆ | | | |

**ಸೂಚನೆ:** ಲೆಡ್ಜರ್ ಪುಟ ಸಂಖ್ಯೆಯನ್ನು ಯಾವುದೇ ಅನುಕೂಲಕರ ರೀತಿಯಲ್ಲಿ ನಮೂದಿಸತಕ್ಕದ್ದು.

**ನಮೂನೆ-5**

[15ನೇ ನಿಯಮವನ್ನು ನೋಡಿ]

ಸಾಲಗಾರ ..........................................

ಸಾಲಗಾರನ ಹೆಸರು ಮತ್ತು ವಿಳಾಸ

.................................. ಲೆಡ್ಜರ್ ಖಾತೆ .......................

ಲೆಡ್ಜರ್ ಸಂಖ್ಯೆ ........................

| ದಿನಾಂಕ | ಸಾಲ ಪಡೆದ ಅಥವಾ ಖರ್ಚು ಹಾಕಲಾದ ಅಸಲು ಮೊಬಲಗು | ಸಾಲಗಳ ವಿವರಣ ಪತ್ರವನ್ನು ಒದಗಿಸುವ ಸಂಬಂಧದಲ್ಲಿ ಬಾಕಿ ಮೊಬಲಗು | ಮರು ಸಂದಾಯಮಾಡಿದ ಅಥವಾ ಜಮೆಮಾಡಿದ ಮೊಬಲಗು | | |
|---|---|---|---|---|---|
| | | | ಅಸಲು | ಬಡ್ಡಿ | ಸಾಲಗಳ ವಿವರಣ ಪತ್ರಗಳ ಸಂಬಂಧದ ಫೀಜುಗಳು |
| (1) | (2) | (3) | (4) | (5) | (6) |
| | | | | | |

| ಪ್ರತಿಯೊಂದು ವಹಿವಾಟಿಗಾಗಿ ಬರಬೇಕಾದ ಬಾಕಿ | | | | ಬಡ್ಡಿ ಲೆಕ್ಕಾಚಾರದ ವಿವರಗಳು | | | |
|---|---|---|---|---|---|---|---|
| ಒಟ್ಟು | ಅಸಲು | ಬಡ್ಡಿ | ಸಾಲಗಳ ವಿವರಣ ಪತ್ರಗಳ ಸಂಬಂಧದ ಫೀಜುಗಳು | ಅಸಲಿನ ಬಾಕಿ | ತಿಂಗಳುಗಳು | ವಸೂಲಿ ಮಾಡಲಾದ ಬಡ್ಡಿಯ ಮೊಬಲಗು | ಷರಾ |
| (7) | (8) | (9) | (10) | (11) | (12) | (13) | (14) |
| | | | | | | | |

**ನಮೂನೆ - 5ಎ**

[15 ನೇ ನಿಯಮ ನೋಡಿ]

ಲೆಡ್ಜರ್ ಪುಟ ಸಂಖ್ಯೆ
ಸಾಲಗಾರನ ಹೆಸರು
ಸಾಲಗಾರನ ಪೂರ್ಣ ವಿಳಾಸ

| ಸಾಲ ಕೊಟ್ಟವನು | | | | ಸಾಲಗಾರ | | | |
|---|---|---|---|---|---|---|---|
| ಮೊಬಲಗು | ದಿನಾಂಕ | ನಗದಿ ಪುಸ್ತಕದಲ್ಲಿ ಸಂವಾದಿ ನಮೂದಿನ ಪುಟ ಸಂಖ್ಯೆ | ವಿವರಗಳು | ಮೊಬಲಗು | ದಿನಾಂಕ | ನಗದಿ ಪುಸ್ತಕದಲ್ಲಿ ಸಂವಾದಿ ನಮೂದಿನ ಪುಟ ಸಂಖ್ಯೆ | ಭದ್ರತೆ ಇತ್ಯಾದಿಗಳ ವಿವರಗಳು |
| (1) | (2) | (3) | (4) | (5) | (6) | (7) | (8) |
| ಒಟ್ಟು ಸ್ವೀಕೃತಿ | | | | | | ಒಟ್ಟು ಸಂದಾಯ | |

**ಸಂಕ್ಷಿಪ್ತಿ**

**ಅಸಲು** **ಬಡ್ಡಿ**

ಸಾಲ ಪಡೆದದ್ದು (ವರ್ಷದ ಅವಧಿಯಲ್ಲಿ)
ವಸೂಲಿಗಳು (ವರ್ಷದ ಅವಧಿಯಲ್ಲಿ)
ನಿವ್ವಳ ಬಾಕಿ
ಮುಂದಕ್ಕೆ ಒಯ್ಯಲಾದುದು.

**ನಮೂನೆ-6**

[15ನೇ ನಿಯಮವನ್ನು ನೋಡಿ]

**ಸಾಲದ ಷರತ್ತುಗಳ ವಿವರಗಳನ್ನು ತೋರಿಸುವ ವಿವರಣ ಪತ್ರ**

| |
|---|
| **ಸಾಲಗಾರನ ಹೆಸರು** |
| **ವಿಳಾಸ** |
| 1. ಸಾಲದ ಮೊಬಲಗು |
| 2. ಸಾಲ ನೀಡಿದ ದಿನಾಂಕ |
| 3. ಸಾಲ ತೀರುವಳಿ ದಿನಾಂಕ ಯಾವುದಾದರೂ ಇದ್ದರೆ ಆ ದಿನಾಂಕ |
| 4. ವಾರ್ಷಿಕ ಬಡ್ಡಿ ದರ |
| 5. ಭದ್ರತೆಯ ಸ್ವರೂಪ |
| 6. ದಸ್ತಾವೇಜುಗಳು ಯಾವುವಾದರೂ ಇದ್ದರೆ ಅವುಗಳ ವಿವರಗಳು |
| 7. ಸಾಲ ನೀಡಿದುದರ ಮೇಲೆ ವಿಧಿಸಲಾದ ಯಾವುದೇ ವಿಶೇಷ ಷರತ್ತು |
| 8. ಸಂಬಂಧಪಟ್ಟ ಇತರ ಮಾಹಿತಿ |

ಲೇವಾದೇವಿದಾರನ ಸಹಿ

ಲೇವಾದೇವಿದಾರನ ಹೆಸರು
ಮತ್ತು ವಿಳಾಸ
ದಿನಾಂಕ. . . . . . . . . . . . . . . .

**ಸೂಚನೆ.-** ಪ್ರತಿಯೊಂದು ಸಾಲದ ವ್ಯವಹಾರದ ಸಂಬಂಧದಲ್ಲಿ ಪ್ರತ್ಯೇಕ ವಿವರಣ ಪತ್ರವನ್ನು ಒದಗಿಸತಕ್ಕದ್ದು. ವಸ್ತು ರೂಪದ ಸಾಲವಾಗಿದ್ದಲ್ಲಿ ಮುಂಗಡವಾಗಿ ನೀಡಲಾದ ಸರಕಿಗೆ ಪ್ರತಿಯೊಂದು ವ್ಯವಹಾರದ ದಿನಾಂಕದಂದು ಅದಕ್ಕೆ ಇದ್ದ ಮಾರುಕಟ್ಟೆ ಮೌಲ್ಯವನ್ನು ಉಲ್ಲೇಖಿಸಿರಬೇಕು.

## ನಮೂನೆ - 7

[16(1)ನೇ ನಿಯಮವನ್ನು ನೋಡಿ]

**21ನೇ ಪ್ರಕರಣದ (1) ನೇ ಉಪ - ಪ್ರಕರಣದ ಅಡಿಯಲ್ಲಿ ಲೇವಾದೇವಿದಾರನು ತನ್ನ ಸಾಲಗಾರರಿಗೆ ನೀಡಬೇಕಾದ ಲೆಕ್ಕಪತ್ರಗಳ ವಾರ್ಷಿಕ ವಿವರಣ ಪತ್ರ.**

| | |
|---|---|
| ಸಾಲಗಾರನ ಹೆಸರು | |
| ವೃತ್ತಿ | |
| ವಿಳಾಸ | |
| ಲೆಡ್ಜರ್ ಖಾತೆಯ ಸಂಖ್ಯೆ ಅಥವಾ ಲೆಡ್ಜರ್ ಪುಟ ಸಂಖ್ಯೆ | |
| ಲೇವಾದೇವಿದಾರನಿಗೆ ಬಾಕಿಯಿರುವ ಅಸಲು ಮತ್ತು ಬಡ್ಡಿಯ ಪ್ರತ್ಯೇಕ ಮೊಬಲಗು ಮತ್ತು ಸಾಲಗಳ ವಿವರಣ ಪತ್ರವನ್ನು ಒದಗಿಸಿದ ಸಂಬಂಧದಲ್ಲಿ ಬಾಕಿಯಿರುವ ಫೀಜಿನ ಮೊಬಲಗು | |
| ಸಾಲದ ಸಂಬಂಧದಲ್ಲಿ ವರ್ಷದ ಅವಧಿಯಲ್ಲಿ ಲೇವಾದೇವಿದಾರನು ಈಗಾಗಲೇ ಸ್ವೀಕರಿಸಿದ ಪ್ರತಿಯೊಂದು ಸಂದಾಯದ ಮೊಬಲಗು ಹಾಗೂ ಪ್ರತಿಯೊಂದು ಸಂದಾಯವನ್ನು ಮಾಡಿದ ದಿನಾಂಕ | |
| ಬಡ್ಡಿಯ ಲೆಕ್ಕಕ್ಕೆ ಮೊದಲು ಜಮೆ ಮಾಡಲಾದ ಎಲ್ಲ ಸಂದಾಯಗಳು ಮತ್ತು ಆ ಸಮಯದಲ್ಲಿ ಬಾಕಿ ಇದ್ದ ಬಡ್ಡಿಯ ಶಿಲ್ಕನ್ನು ತೀರಿಸಲು ಸಾಕಾಗುವುದಕ್ಕಿಂತ ಹೆಚ್ಚಿನದಾದ ಯಾವುದೇ ಸಂದಾಯದ ಉಳಿಕೆ ಇದ್ದರೆ, ಸಾಲಗಾರನ ಅಸಲಿನ ಲೆಕ್ಕಕ್ಕೆ ಜಮೆ ಮಾಡತಕ್ಕ ಆ ಉಳಿಕೆ ಹಣ | |
| *ಲೇವಾದೇವಿದಾರನು ಅಸಲಿನ ಲೆಕ್ಕಕ್ಕೆ ಮೊದಲು ಜಮೆ ಮಾಡಿದ ಸಂದಾಯಗಳು ; ಮತ್ತು ಕಡಿಮೆಯಾಗುತ್ತ ಹೋಗುವ ಅಸಲಿನ ಶಿಲ್ಕಿನ ಆಧಾರದ ಮೇಲೆ ಲೆಕ್ಕ ಹಾಕಲಾದ ಬಡ್ಡಿಯ ಲೆಕ್ಕದಲ್ಲಿ ಜಮೆ ಮಾಡಿದ ಉಳಿದ ಸಂದಾಯಗಳು; ಮತ್ತು ಬಾಕಿ ಬಡ್ಡಿಯನ್ನು ಸಂಪೂರ್ಣವಾಗಿ ಸಂದಾಯ ಮಾಡಿದಾಗ, ಮತ್ತೆ ಅಸಲು ಲೆಕ್ಕಕ್ಕೆ ಜಮೆ ಮಾಡತಕ್ಕ ಯಾವುದೇ ಸಂದಾಯದ ಉಳಿಕೆ | |
| ಸಾಲಗಳ ವಿವರಣ ಪತ್ರಗಳನ್ನು ಒದಗಿಸಿದ ಬಗ್ಗೆ ಬಾಕಿ ಇರುವ ಫೀಜುಗಳ ಸಂಬಂಧದಲ್ಲಿ ಮಾಡಿದ ಸಂದಾಯಗಳು | |
| ಸಂದಾಯವಾಗದೆ ಉಳಿದಿರುವ ಅಸಲಿನ ಮೊಬಲಗು, ಅದರ ಮೇಲಿನ ಬಡ್ಡಿ ಮತ್ತು ಸಾಲಗಳ ವಿವರಣಪತ್ರಗಳ ಸಂಬಂಧದಲ್ಲಿ ಫೀಜುಗಳು ಬಾಕಿ ಇರುವ ಕಾರಣದಿಂದಾಗಿ ಸಂದಾಯವಾಗದೆ ಉಳಿದಿರುವ ಮೊಬಲಗು | |

* ಅಗತ್ಯವಿಲ್ಲದಿರುವುದನ್ನು ಹೊಡೆದುಹಾಕಿ.

ಲೇವಾದೇವಿದಾರ ಅಥವಾ ಅವನ ಏಜೆಂಟ್

## ನಮೂನೆ 8

[18ನೇ ನಿಯಮವನ್ನು ನೋಡಿ]

**ಪಾಸ್ ಬುಕ್ಕು**

ಲೇವಾದೇವಿದಾರನ ಹೆಸರು

ಅವನ ವಿಳಾಸ

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ ಅಡಿಯಲ್ಲಿ ಲೈಸೆನ್ಸ್ ಪಡೆದ ಲೇವಾದೇವಿದಾರ

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973 ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**ಪಾಸ್ ಬುಕ್ಕಿನ ಒಳಾಂಶಗಳು**

**ಪಾಸ್ ಬುಕ್ಕು**

ಲೇವಾದೇವಿದಾರನ ಹೆಸರು : ಸಾಲಗಾರನ ಹೆಸರು:

ಅವನ ವಿಳಾಸ : ವಿಳಾಸ :

| ಕ್ರ.ಸಂ. | ದಿನಾಂಕ, ತಿಂಗಳು ಮತ್ತು ವರ್ಷ | ಮುಂಗಡ ನೀಡಿದ ಸಾಲದ ಮೊತ್ತ | ಭದ್ರತೆಯ ಸ್ವರೂಪ ದಸ್ತಾವೇಜುಗಳ ವಿವರಗಳು ಮತ್ತು ವಿಶೇಷ ಷರತ್ತುಗಳು ಯಾವುವಾದರೂ ಇದ್ದರೆ, ಅವು | ಬಡ್ಡಿಯ ದರ | ಅವಧಿಯ ಮುಕ್ತಾಯ ವಾಗುವ ದಿನಾಂಕ | ಸಾಲಗಾರನು ಮರುಸಂದಾಯ ಮಾಡಿದ ಒಟ್ಟು ಮೊತ್ತ |
|---|---|---|---|---|---|---|
| (1) | (2) | (3) | (4) | (5) | (6) | (7) |
| | | | | | | |

| ಸಾಲಗಾರನಿಂದ ಮರುಸಂದಾಯವಾದ ಮೊತ್ತವನ್ನು ಜಮೆ ಮಾಡಿದ ರೀತಿ | | ಸಾಲಗಾರನಿಂದ ವಸೂಲಿ ಮಾಡಬೇಕಾದ ಬಾಕಿ | | ಲೇವಾದೇವಿದಾರನ ಸಹಿ | ಷರಾ |
|---|---|---|---|---|---|
| ಅಸಲು | ಬಡ್ಡಿ | ಅಸಲು | ಬಡ್ಡಿ | | |
| (8) | (9) | (10) | (11) | (12) | (13) |

## ನಮೂನೆ 9

[18ನೇ ನಿಯಮ ನೋಡಿ]

## ಮೇಲಿನ ರಕ್ಷಾಪುಟ

## ಪಾಸ್ ಬುಕ್ಕು

ಲೈಸೆನ್ಸ್ ಪಡೆದ ಲೇವಾದೇವಿದಾರನ ಹೆಸರು ..............................................................

ವಿಳಾಸ . . . . . . . . . . . . . . . . . . . . . . . . . . . . . .

ಸಾಲಗಾರನ ಹೆಸರು . . . . . . . . . . . . . . . . . . . . . . . . . .

ಅವನ ವಿಳಾಸ . . . . . . . . . . . . . . . . . . . . . . . . . . . .

## ಪಾಸ್ ಬುಕ್ಕಿನ ಒಳಾಂಶಗಳು

ಲೇವಾದೇವಿದಾರನ ಹೆಸರು. . . . . . . . . . . . . . . . . . . . . . . . . .

ಅವನ ವಿಳಾಸ . . . . . . . . . . . . . . . . . . . . . . . . . . . .

ಸಾಲಗಾರನ ಹೆಸರು . . . . . . . . . . . . . . . . . . . . . . . . . .

ಅವನ ವಿಳಾಸ . . . . . . . . . . . . . . . . . . . . . . . . . . . . .

ಸಾಲ ನೀಡಿದ ದಿನಾಂಕ . . . . . . . . . . . . . . . . . . . . . . . .

ಸಾಲದ ಮೊಬಲಗು. . . . . . . . . . . . . . . . . . . . . . . . . . .

ವಾರ್ಷಿಕ ಬಡ್ಡಿಯ ದರ . . . . . . . . . . . . . . . . . . . . . . . . .

ಭದ್ರತೆಯ ಸ್ವರೂಪ. . . . . . . . . . . . . . . . . . . . . . . . . . .

ದಸ್ತಾವೇಜಿನ ವಿವರ. . . . . . . . . . . . . . . . . . . . . . . . . .

ಸಾಲ ನೀಡುವಾಗ ವಿಧಿಸಿದ ಆ ಯಾವುದೇ ವಿಶೇಷ ಷರತ್ತುಗಳು. . . . . . . . . . . .

| ಸಾಲ ಕೊಟ್ಟವನು | | | ಸಾಲಗಾರ | | |
|---|---|---|---|---|---|
| ಮೊಬಲಗು | ದಿನಾಂಕ | ವಿವರಗಳು | ಮೊಬಲಗು | ದಿನಾಂಕ | ವಿವರಗಳು |
| ಒಟ್ಟು ಸ್ವೀಕೃತಿ | | | | ಒಟ್ಟು ಸಂದಾಯ | |
| ಸಂಕ್ಷಿಪ್ತಿ | | | | ಅಸಲು, ಬಡ್ಡಿ | |
| | | | | | |

## ನಮೂನೆ 10

[19 ನೇ ನಿಯಮವನ್ನು ನೋಡಿ]

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ 30 ನೇ ಪ್ರಕರಣದ (1) ನೇ ಉಪ ಪ್ರಕರಣದ (ಎ) ಖಂಡದ ಅಡಿಯಲ್ಲಿ ತಮಗೆ ಈ ಮೂಲಕ ಸೂಚನೆ ನೀಡುವುದೇನೆಂದರೆ:

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973 ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಶ್ರೀ . . . . . . . . . . ವಿಳಾಸ . . . . . . . . . . ಅವರಿಗೆ ನೀಡಲಾದ

| | |
|---|---|
| ಸಾಲ | |
| ಸಾಲದ ಬಾಕಿ | ಇವುಗಳನ್ನು ಹಸ್ತಾಂತರಣ ಮಾಡಲು ನಿಮ್ಮೊಂದಿಗೆ |
| ಸಾಲದ ಮೇಲಿನ ಬಡ್ಡಿ | |

ಸಾಲದ ಮೇಲಿನ ಬಡ್ಡಿಯ ಬಾಕಿ

ನಾನು ಮಾಡಿಕೊಂಡ ಒಪ್ಪಂದಕ್ಕೆ ಅನುಸಾರವಾಗಿ ಸಾಲದ ಮೊತ್ತದ ಮೇಲೆ ಪ್ರಾಪ್ತವಾದ ಬಡ್ಡಿ / ಬಡ್ಡಿಯ ಬಾಕಿ ಮತ್ತು ಸಾಲಗಾರನಿಗೆ ನೀಡಲಾದ ಮೇಲೆ ಹೇಳಿದ ಸಾಲದ ಮೇರೆಗಿನ ಒಪ್ಪಂದದ ಪ್ರಯೋಜನಗಳು ಹಾಗೂ ಸಾಲಕ್ಕೆ / ಸಾಲದ ಬಡ್ಡಿಗೆ ಸಂಬಂಧಿಸಿದಂತೆ ತೆಗೆದುಕೊಳ್ಳಲಾದ ಭದ್ರತೆಯ ಸಂಬಂಧದಲ್ಲಿ . . . . . . . . ರಿಂದ ಜಾರಿಗೆ ಬರುವಂತೆ ನೀವು ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 ರ ಉಪಬಂಧಗಳಿಗೆ ಒಳಪಡುತ್ತೀರಿ.

ಲೇವಾದೇವಿದಾರನ ಸಹಿ.

ಲೇವಾದೇವಿದಾರನ ಹಿಂದಿನ ಹಸ್ತಾಂತರಣ ಪಡೆದವನು

ದಿನಾಂಕ:

## ನಮೂನೆ 11

[19 ನೇ ನಿಯಮವನ್ನು ನೋಡಿ]

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ 30 ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದ ಅಡಿಯಲ್ಲಿ ಹಸ್ತಾಂತರ ಪಡೆದವನಿಗೆ ಒದಗಿಸಬೇಕಾದ ವಿವರಣ ಪತ್ರ ಅಥವಾ ಮಾಹಿತಿ.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973 ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ತರುವಾಯ ಹಸ್ತಾಂತರ ಪಡೆದವರು ಯಾರಾದರೂ ಇದ್ದರೆ ಅವರೂ ಸೇರಿದಂತೆ ಲೇವಾದೇವಿದಾರನ ಹೆಸರು ಮತ್ತು ಅವನ/ ಅವರ ವಿಳಾಸ/ ವಿಳಾಸಗಳು.

ಸಾಲಗಾರನ ಹೆಸರು:

ವಿಳಾಸ:

1. ಸಾಲದ ದಿನಾಂಕ
2. ಸಾಲದ ಮೊತ್ತ
3. ವಾರ್ಷಿಕ ಬಡ್ಡಿಯ ದರ

3ಎ. ಸಾಲ ನೀಡಿದ ಸಂಬಂಧದಲ್ಲಿ ಬಾಕಿಯಿರುವ ಫೀಜುಗಳ ಮೊಬಲಗು

4. ಇಂದಿನವರೆಗೆ ಸಾಲಗಾರನು ಮಾಡಿದ ಒಟ್ಟು ಮರುಸಂದಾಯಗಳು:
   - (ಎ) ಅಸಲು
   - (ಬಿ) ಬಡ್ಡಿ
   - (ಬಿಬಿ) ಸಾಲದ ವಿವರಣ ಪತ್ರಗಳನ್ನು ಒದಗಿಸುವುದಕ್ಕಾಗಿ ಇರುವ ಫೀಜು
   - (ಸಿ) ಒಟ್ಟು
5. ಈ ಮುಂದಿನವುಗಳ ಮೇಲೆ ಬಾಕಿ ಇರುವ ಮೊಬಲಗು:
   - (ಎ) ಅಸಲು
   - (ಬಿ) ಬಡ್ಡಿ
   - (ಬಿಬಿ) ಸಾಲದ ವಿವರಣ ಪತ್ರಗಳನ್ನು ಒದಗಿಸುವುದಕ್ಕಾಗಿನ ಫೀಜು
   - (ಸಿ) ಒಟ್ಟು

6. ಭದ್ರತೆಯ ಸ್ವರೂಪ ಮತ್ತು ಮೌಲ್ಯ
7. ಹಿಂದಿನ ಹಸ್ತಾಂತರಣಗಳು ಯಾವುವಾದರೂ ಇದ್ದರೆ ಅವೂ ಸೇರಿದಂತೆ ದಸ್ತಾವೇಜುಗಳ ವಿವರಗಳು
8. ಸಾಲಕ್ಕೆ ಸಂಬಂಧಿಸಿದಂತೆ ಯಾವುದೇ ವಿಶೇಷ ಷರತ್ತು
9. ದಸ್ತಾವೇಜುಗಳ ಪ್ರತಿಗಳನ್ನು ಲಗತ್ತಿಸಿದ್ದರೆ ಅವುಗಳ ಪಟ್ಟಿ
10. ಇತರ ಮಾಹಿತಿ, ಯಾವುವಾದರೂ ಇದ್ದರೆ.

ಹಸ್ತಾಂತರಕಾರನ/ ಲೇವಾದೇವಿದಾರರ ಸಹಿ.

ವಿಳಾಸ.

ದಿನಾಂಕ.

## ನಮೂನೆ 12

[19ನೇ ನಿಯಮವನ್ನು ನೋಡಿ]

**........................... ಸಾಲಗಾರ**

ಇವರಿಗೆ

ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 ರ 30ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಅಡಿಯಲ್ಲಿ ಈ ಮೂಲಕ ತಮಗೆ ಸೂಚನೆ ನೀಡುವುದೇನೆಂದರೆ.

..................................ರಂದು ನಾನು ನಿಮಗೆ ನೀಡಿದ ಸಾಲದ ಸಂಬಂಧದಲ್ಲಿ.

| | |
|---|---|
| ಸಾಲ | |
| ಸಾಲದ ಬಾಕಿ | ಇವುಗಳನ್ನು |
| ಸಾಲದ ಮೇಲಿನ ಬಡ್ಡಿ | |
| ಸಾಲದ ಮೆಲಿನ ಬಡ್ಡಿಯ ಬಾಕಿ | |

ಮತ್ತು ಇದರೊಂದಿಗೆ ಪ್ರಾಪ್ತವಾದ ಬಡ್ಡಿ / ಬಡ್ಡಿಯ ಬಾಕಿ ಮತ್ತು ಮೇಲೆ ಹೇಳಲಾದ ಸಾಲದ ಒಪ್ಪಂದದ ಮೇರೆಗಿನ ಪ್ರಯೋಜನಗಳು ಹಾಗೂ ಸಾಲಕ್ಕೆ / ಸಾಲದ ಬಡ್ಡಿಗೆ ಸಂಬಂಧಿಸಿದಂತೆ ತೆಗೆದುಕೊಳ್ಳಲಾದ ಭದ್ರತೆಯನ್ನು ಅವರಿಗೆ (ಹಸ್ತಾಂತರಣ ಪಡೆದವನ ಹೆಸರು) ............................... (ಹಸ್ತಾಂತರಣ ಪಡೆದವನ ವಿಳಾಸ) ........................ ರಂದು (ದಿನಾಂಕ) ಹಸ್ತಾಂತರಣ ಮಾಡಲು ಉದ್ದೇಶಿಸಿದ್ದೇನೆ ಮತ್ತು ಅಂಥ ಹಸ್ತಾಂತರಣದ ದಿನಾಂಕದಿಂದ ಮೇಲೆ ಹೆಸರಿಸಲಾದ ಹಸ್ತಾಂತರಣ ಪಡೆದವನು [1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ ಉಪಬಂಧಗಳ ಅಡಿಯಲ್ಲಿ ಎಲ್ಲ ಹಕ್ಕುಗಳನ್ನು ಚಲಾಯಿಸತಕ್ಕದ್ದು ಮತ್ತು ಎಲ್ಲ ಹೊಣೆಗಾರಿಕೆಗಳನ್ನು ಹೊಂದಿರತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಲೇವಾದೇವಿದಾರನ ಸಹಿ

ವಿಳಾಸ.

ಲೇವಾದೇವಿದಾರನ ಹಿಂದಿನ ಹಸ್ತಾಂತರಣ ಪಡೆದವನ ಸಹಿ ಮತ್ತು ವಿಳಾಸ.

## ನಮೂನೆ 13

[20 ನೇ ನಿಯಮವನ್ನು ನೋಡಿ]

(ಲೆಕ್ಕಗಳನ್ನು ತೆಗೆದುಕೊಳ್ಳುವುದಕ್ಕಾಗಿ 33 ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ನ್ಯಾಯಾಲಯಕ್ಕೆ ಅರ್ಜಿ)

. . . . . . . . . . . . . . . . . .. ನ್ಯಾಯಾಲಯದಲ್ಲಿ

ಸಂಕೀರ್ಣ ಪ್ರಕರಣ ಸಂ. . . . . . . . . . . . 200

ಈ ಮುಂದೆ ನಮೂದಿಸಲಾದ ಸಾಲಗಾರನು, ಈ ಮುಂದೆ ವಿವರಿಸಲಾದ ಸಾಲದ ಲೆಕ್ಕಪತ್ರಗಳನ್ನು ತೆಗೆದುಕೊಳ್ಳುವುದಕ್ಕಾಗಿ ಮತ್ತು ಲೇವಾದೇವಿದಾರನಿಗೆ ಬಾಕಿ ಇರುವ ಮೊತ್ತವನ್ನು ಘೋಷಿಸುವುದಕ್ಕಾಗಿ ಅರ್ಜಿ ಸಲ್ಲಿಸಿದ್ದಾನೆ.

**ಸಾಲದ ವಿವರಗಳು**

1. ದಸ್ತಾವೇಜುಗಳು, ಯಾವುವಾದರೂ ಇದ್ದರೆ, ಅವುಗಳ ವಿವರಗಳು:
2. ಮೊಬಲಗು:

3. ಲೇವಾದೇವಿದಾರನ ವಿವರಣೆ:
   (ಎ) ಹೆಸರು
   (ಬಿ) ತಂದೆಯ / ಗಂಡನ ಹೆಸರು
   (ಸಿ) ವಿಳಾಸ
4. ಸಾಲಗಾರನ ವಿವರಣೆ:
   (ಎ) ಹೆಸರು
   (ಬಿ) ತಂದೆಯ / ಗಂಡನ ಹೆಸರು
   (ಸಿ) ವಿಳಾಸ

ದಿನಾಂಕ: ಸಹಿ.

**ನಮೂನೆ 14**

[15ನೇ ನಿಯಮವನ್ನು ನೋಡಿ]

**ಲೇವಾದೇವಿದಾರನಿಗೆ ಸಮನು**

ಸಂಖ್ಯೆ:

................................

................................

.............................. ಇವರಿಗೆ, ಕಚೇರಿಯ ಹೆಸರು . . . . . . . . . .

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ ಅಡಿಯಲ್ಲಿ ಒಂದು ಲೈಸೆನ್ಸ್ ನೀಡಿಕೆಗಾಗಿ ಸಲ್ಲಿಸಿರುವ ನಿಮ್ಮ ಅರ್ಜಿಯನ್ನು ಸ್ವೀಕರಿಸಲಾಗಿದೆ, ಸದರಿ ಅರ್ಜಿಗೆ ಸಂಬಂಧಿಸಿದಂತೆ ನಿಮ್ಮನ್ನು ಪರೀಕ್ಷಿಸುವ ಸಂಬಂಧವಾಗಿ 200 ...............ರ .................... ತಿಂಗಳ .................... ದಿನದಂದು .......................... ಗಂಟೆಗೆ ಮೇಲ್ಕಂಡ ವಿಳಾಸದಲ್ಲಿ ನನ್ನ ಮುಂದೆ ಖುದ್ದಾಗಿ ಹಾಜರಾಗುವಂತೆ ಸದರಿ ಅಧಿನಿಯಮದ 14 ನೇ ಪ್ರಕರಣದ ಅನುಸಾರವಾಗಿ ಈ ಮೂಲಕ ನಿಮಗೆ ಸಮನು ನೀಡಲಾಗಿದೆ; ಮತ್ತು ನೀವು ಆ ದಿನ ನಿಮ್ಮ ಅರ್ಜಿಯ ಸಮರ್ಥನೆಗಾಗಿ ನೀವು ಉತ್ತರಿಸಲು ಉದ್ದೇಶಿಸಿದ ಎಲ್ಲ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ನಿಮಗೆ ನಿರ್ದೇಶನ ನೀಡಲಾಗಿದೆ.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973 ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಮೇಲೆ ನಮೂದಿಸಲಾದ ದಿನದಂದು ನೀವು ಹಾಜರಾಗಲು ತಪ್ಪಿದಲ್ಲಿ, ಸದರಿ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ನೀಡಿಕೆಗಾಗಿ ಸಲ್ಲಿಸಲಾಗಿರುವ ನಿಮ್ಮ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ ಎಂಬುದನ್ನು ಗಮನಿಸುವುದು.

200 ............ ರ ............... ತಿಂಗಳ ......................... ದಿನದಂದು ನನ್ನ ಸಹಿ ಮತ್ತು ಮೊಹರಿನೊಂದಿಗೆ ನೀಡಲಾಗಿದೆ.

ಮೊಹರು. ಅಧಿಕಾರಿಯ ಸಹಿ.

**ನಮೂನೆ 15**

[22ನೇ ನಿಯಮವನ್ನು ನೋಡಿ]

**ಸಾಕ್ಷಿದಾರನಿಗೆ ಸಮನು**

ಸಂಖ್ಯೆ:

................................. ಕಚೇರಿಯ ಹೆಸರು . . . . . . . . . . . . . . .

.................................

................................. ಇವರಿಗೆ,

[1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961ರ ಅಡಿಯಲ್ಲಿ ಒಂದು ಲೈಸೆನ್ಸ್ ನೀಡುವಂತೆ ಕೋರಿ ಶ್ರೀ........................... ಅವರು ಸಲ್ಲಿಸಿದ ಅರ್ಜಿಯ ಸಂಬಂಧದಲ್ಲಿ ನಿಮ್ಮನ್ನು ಪರೀಕ್ಷಿಸುವುದು ಅವಶ್ಯಕವಾಗಿರುವುದರಿಂದ, ನೀವು 200 . . . . . . . . ರ. . . . . . . . . .ತಿಂಗಳ. . . . . . . . . ದಿನದಂದು . . . . . . . . . . ಪೂರ್ವಾಹ್ನ / ಅಪರಾಹ್ನ . . . . . . . . . ಗಂಟೆಗೆ ಮೇಲ್ಕಂಡ ವಿಳಾಸದಲ್ಲಿ ನನ್ನ ಮುಂದೆ ಖುದ್ದಾಗಿ ಹಾಜರಾಗಲು, ಸದರಿ ಅಧಿನಿಯಮದ 14 ನೇ ಪ್ರಕರಣದ ಅನುಸಾರವಾಗಿ ನಿಮಗೆ ಸಮನು ಮಾಡಿದೆ ಮತ್ತು ನೀವು ಒದಗಿಸಿದ ಮಾಹಿತಿಗೆ ಸಮರ್ಥನೆಯಾಗಿ ನಿಮ್ಮ ಸ್ವಾಧೀನದಲ್ಲಿರಬಹುದಾದ ಯಾವುವೇ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ನಿಮಗೆ ನಿರ್ದೇಶನ ನೀಡಲಾಗಿದೆ.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ನೀವು ಕಾನೂನು ಸಮ್ಮತ ಕಾರಣವಿಲ್ಲದೆ ಈ ಆದೇಶವನ್ನು ಪಾಲಿಸಲು ತಪ್ಪಿದರೆ, ನೀವು ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗೆ ಗುರಿಯಾಗುತ್ತೀರಿ ಎಂಬುದನ್ನು ಗಮನಿಸುವುದು.

200. . . . . . . . . ರ . . . . . . . . . ತಿಂಗಳ. . . . . . . .ದಿನದಂದು ನನ್ನ ಸಹಿ ಮತ್ತು ಮೊಹರಿನೊಂದಿಗೆ ನೀಡಲಾಗಿದೆ.

ಮೊಹರು. ಅಧಿಕಾರಿಯ ಪದನಾಮ.

[ಸಂ. ಎ ಎಫ್ 41 ಸಿಸಿಎಸ್ 62]

## [1][ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ನಿಯಮಗಳು, 1985

**ಜಿ.ಎಸ್. ಆರ್ 222.-** ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 12) 44 ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965 ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಒಂದು ಕರಡನ್ನು, ಅಧಿಸೂಚನೆ ಸಂಖ್ಯೆ ಸಿಎಂ ಡಬ್ಲ್ಯೂ 1 ಸಿಎಂಎಲ್ 85, ದಿನಾಂಕ 31 ನೇ ಮೇ 1985ರಲ್ಲಿ, ದಿನಾಂಕ 1ನೇ ಜೂನ್ 1985ರ ವಿಶೇಷ ರಾಜ್ಯಪತ್ರದ ಭಾಗ iv , ಪ್ರಕರಣ 2-ಸಿ **(i)** ಪುಟ 13 (ಜಿ ಎಸ್ ಆರ್ 137) ರಲ್ಲಿ ಪ್ರಕಟಿಸುವುದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ, ಇದರ ಪ್ರಕಟಣೆಯ ದಿನಾಂಕದಿಂದ 14 ದಿನಗಳ ಅವಧಿಯೊಳಗಾಗಿ ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ;

1. ಕರ್ನಾಟಕ ರಾಜ್ಯಪತ್ರ ಭಾಗ IV 2 ಸಿ (i) ವಿಶೇಷ ಸಂಚಿಕೆ ಸಂಖ್ಯೆ 498, ದಿನಾಂಕ 17.9.85 ರಲ್ಲಿ ಪ್ರಕಟಿಸಲಾಗಿದೆ. (ಅಧಿಸೂಚನೆ ಸಂ. ಸಿಎಂಡಬ್ಲ್ಯೂ 1 ಸಿ ಎಂ ಎಲ್ 185, ದಿನಾಂಕ 12/13.9.1985).

ಮತ್ತು, 1ನೇ ಜೂನ್ 1985ರಂದು ಸದರಿ ರಾಜ್ಯಪತ್ರವು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ಸದರಿ ಕರಡಿನ ಮೇಲೆ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಾರದಿರುವುದರಿಂದ;

ಈಗ, ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 12) 44 ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ, ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:-

**1. ಹೆಸರು ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ನಿಯಮಗಳು, 1985 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.-** ಕರ್ನಾಟಕ ಲೇವಾದೇವಿದಾರರ ನಿಯಮಗಳು, 1956ರ (ಇದರಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 5ನೇ ನಿಯಮದ (2) ನೇ ಉಪ ನಿಯಮದಲ್ಲಿ "ಲೈಸೆನ್ಸಿನ ನವೀಕರಣ" ಎಂಬ ಪದಗಳಿಗೆ "ತರುವಾಯದ ವರ್ಷಕ್ಕಾಗಿ ಹೊಸ ಲೈಸೆನ್ಸಿನ ಮಂಜೂರಾತಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 10 ನೇ ನಿಯಮದ ತಿದ್ದುಪಡಿ.-** ಸದರಿ ನಿಯಮಗಳ 10 ನೇ ನಿಯಮದ (1) ನೇ ಉಪನಿಯಮದಲ್ಲಿ "10 ರೂಪಾಯಿ ಮತ್ತು 3 ರೂಪಾಯಿ" ಎಂಬ ಅಂಕಿಗಳು ಮತ್ತು ಪದಗಳಿಗೆ "ಸಂದಾಯಮಾಡಬೇಕಾದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 14ಎ, 14ಬಿ, 14ಸಿ, 14ಡಿ ಮತ್ತು 14ಇ ಹೊಸ ನಿಯಮಗಳ ಸೇರ್ಪಡೆ.-** ಸದರಿ ನಿಯಮಗಳ 14ನೇ ನಿಯಮದ ತರುವಾಯ, ಈ ಮುಂದಿನ ನಿಯಮಗಳನ್ನು ಸೇರಿಸತಕ್ಕದ್ದು, ಎಂದರೆ:-

**"14ಎ. ಭದ್ರತಾ ಮೊಬಲಗಿನ ಸಂದಾಯ.- (1)** ಪ್ರತಿಯೊಬ್ಬ ಲೈಸೆನ್ಸ್‌ದಾರನು, ರಿಜಿಸ್ಟ್ರಾರ್ ಜನರಲನು ಅಧಿಸೂಚಿಸಿದ ಲೆಕ್ಕ ಶೀರ್ಷಿಕೆಯಡಿಯಲ್ಲಿ 7ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಭದ್ರತಾ ಮೊಬಲಗನ್ನು ನಗದಾಗಿ ಸರ್ಕಾರದ ಖಜಾನೆಯಲ್ಲಿ ಠೇವಣಿ ಇಡತಕ್ಕದ್ದು.

(2) ಭದ್ರತಾ ಮೊಬಲಗನ್ನು ಠೇವಣಿಯಾಗಿಟ್ಟ ಬಗ್ಗೆ ಖಜಾನೆ ರಸೀದಿಯನ್ನು ಸಂಬಂಧಿಸಿದ ಸಹಾಯಕ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು.

**14ಬಿ. 7ಎ ಪ್ರಕರಣದ ಅಡಿಯಲ್ಲಿ ಮೊಬಲಗಿನ ಘೋಷಣೆ.-** 7ಎ ಪ್ರಕರಣದ ಅಡಿಯಲ್ಲಿ ಪ್ರತಿಯೊಂದು ಘೋಷಣೆಯ ನಮೂನೆ 3ಎ ಯಲ್ಲಿರತಕ್ಕದ್ದು.

**14ಸಿ. 7ಬಿ ಪ್ರಕರಣದ ಅಡಿಯಲ್ಲಿ ಆದೇಶದ ಬಗ್ಗೆ ತಿಳಿಸುವುದು.-** 7ಬಿ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನು ಮಾಡಿದ ಪ್ರತಿಯೊಂದು ಆದೇಶವನ್ನು ಲೈಸೆನ್ಸ್‌ದಾರನಿಗೆ ಖುದ್ದಾಗಿ ಅಥವಾ ಅವನ ಏಜೆಂಟನಿಗೆ ಅಥವಾ ಲೈಸೆನ್ಸ್‌ದಾರನ ವಾಸದ ಮನೆ ಅಥವಾ ವ್ಯವಹಾರದ ಸ್ಥಳ ಅಥವಾ ಕೊನೆಯದಾಗಿ ಇದ್ದನೆಂದು ತಿಳಿದುಬಂದ ವಾಸಸ್ಥಳದ ಅಥವಾ ವ್ಯವಹಾರ ಸ್ಥಳದ ವಿಳಾಸಕ್ಕೆ ತಲುಪೊಪ್ಪಿಗೆ ಸಹಿತ ನೋಂದಾಯಿತ ಅಂಚೆಯ ಮೂಲಕ ತಿಳಿಸತಕ್ಕದ್ದು.

**14ಡಿ. ಮುಟ್ಟುಗೋಲು ಹಾಕಿಕೊಳ್ಳಲಾದ ಮೊಬಲಗಿನಿಂದ ಸಂದಾಯ.-** (1) ಒಬ್ಬ ಲೈಸೆನ್ಸುದಾರನ ಕೃತ್ಯಗಳಿಂದ ಬಾಧಿತನಾದ ಒಬ್ಬ ಸಾಲಗಾರನು ಕ್ಲೇಮಿನ ಸ್ವರೂಪ ಮತ್ತು ಅಂಥ ಲೈಸೆನ್ಸುದಾರನಿಂದ ಬರಬೇಕಾದ ಮೊಬಲಗನ್ನು ನಿರ್ದಿಷ್ಟಪಡಿಸಿ ಒಂದು ಅರ್ಜಿಯನ್ನು ರಿಜಿಸ್ಟ್ರಾರರಿಗೆ ಸಲ್ಲಿಸತಕ್ಕದ್ದು.

(2) (1) ನೇ ಉಪ ನಿಯಮದ ಅಡಿಯಲ್ಲಿ ರಿಜಿಸ್ಟ್ರಾರನು ಅರ್ಜಿಯನ್ನು ಸ್ವೀಕರಿಸಿದ ಮೇಲೆ, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಮುಟ್ಟುಗೋಲು ಹಾಕಿಕೊಳ್ಳಲಾದ ಮೊಬಲಗಿನಿಂದ ಅರ್ಜಿದಾರನಿಗೆ ಸಂದಾಯ ಮಾಡಬೇಕಾದ ಮೊಬಲಗನ್ನು ನಿರ್ಧರಿಸತಕ್ಕದ್ದು:

ಪರಂತು, ಅರ್ಜಿದಾರರು ಒಬ್ಬರಿಗಿಂತ ಹೆಚ್ಚಾಗಿದ್ದರೆ, ಅರ್ಜಿದಾರರಿಗೆ ಸಂದಾಯವಾಗಬೇಕೆಂದು ನಿರ್ಧರಿಸಿದ ಮೊಬಲಗನ್ನು ಪ್ರಮಾಣಾನುಸಾರವಾಗಿ ಸಂದಾಯ ಮಾಡತಕ್ಕದ್ದು.

**14ಇ. ಭದ್ರತಾ ಮೊಬಲಗು ಮರುಪಾವತಿ.-** (1) ತನ್ನ ವ್ಯವಹಾರವನ್ನು ಸಮಾಪನಗೊಳಿಸಿದ ಅಥವಾ ತನ್ನ ಲೈಸೆನ್ಸಿನ ಅವಧಿಯು ಮುಕ್ತಾಯವಾದ ತರುವಾಯ ಹೊಸ ಲೈಸೆನ್ಸಿಗಾಗಿ ಅರ್ಜಿ ಹಾಕದಿರುವ ಲೈಸೆನ್ಸುದಾರನು, 7ಎ ಪ್ರಕರಣದ ಅಡಿಯಲ್ಲಿ ಠೇವಣಿ ಇಟ್ಟ ಮೊಬಲಗಿನ ಮರುಪಾವತಿಗಾಗಿ ರಿಜಿಸ್ಟ್ರಾರನಿಗೆ ಅರ್ಜಿ ಸಲ್ಲಿಸಬಹುದು.

(2) ರಿಜಿಸ್ಟ್ರಾರನು, (1) ನೇ ಉಪನಿಯಮದ ಅಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಲೈಸೆನ್ಸ್‌ದಾರನು ತನ್ನ ವ್ಯವಹಾರವನ್ನು ಸಮಾಪನಗೊಳಿಸಿದ್ದಾನೆಂದು ಅಥವಾ ಮುಂಬರುವ ವರ್ಷಕ್ಕಾಗಿ ಹೊಸ ಲೈಸೆನ್ಸ್‌ಗಾಗಿ ಅರ್ಜಿ ಹಾಕಿಲ್ಲವೆಂದು ಮತ್ತು ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸಿರುವುದರ ಸಂಬಂಧದಲ್ಲಿ ಅವನ ವಿರುದ್ಧ ಯಾವುದೇ ಮೊಕದ್ದಮೆ ಇತ್ಯರ್ಥದಲ್ಲಿಲ್ಲವೆಂದು ಮನದಟ್ಟು ಮಾಡಿಕೊಂಡ ತರುವಾಯ, 7ಎ ಪ್ರಕರಣದ ಅಡಿಯಲ್ಲಿ ಠೇವಣಿಯಾಗಿಟ್ಟ ಮೊಬಲಗನ್ನು ಅಥವಾ 7 ಬಿ ಪ್ರಕರಣದ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ತರುವಾಯ, ಅದರ ಬಾಕಿ ಯಾವುದಾದರೂ ಇದ್ದರೆ ಆ ಬಾಕಿ ಇರುವಷ್ಟು ಮೊಬಲಗನ್ನು ಮರು ಪಾವತಿ ಮಾಡುವಂತೆ ಆದೇಶಿಸಬಹುದು."

## ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ನಿಯಮಗಳು, 1988

**ಜಿ.ಎಸ್ ಆರ್ 76.-** ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ 12) 44ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965 ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡುವ ಕರಡು ನಿಯಮಗಳನ್ನು ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 29 (ಸಿ ಎಂ ಡಬ್ಲ್ಯೂ 1 ಸಿ ಎಂ ಎಲ್ 88, ದಿನಾಂಕ 3 ನೇ ಫೆಬ್ರವರಿ 1988) ಕರ್ನಾಟಕ ವಿಶೇಷ ರಾಜ್ಯಪತ್ರ, ದಿನಾಂಕ 6ನೇ ಫೆಬ್ರವರಿ 1988ರ ಭಾಗ iv, ಪ್ರಕರಣ 2 ಸಿ(i) ಪುಟ 1 - 2 ರಲ್ಲಿ ಪ್ರಕಟಿಸುವುದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಇದು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವು 6ನೇ ಫೆಬ್ರವರಿ 1988ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಾರದಿರುವುದರಿಂದ;

ಈಗ, ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 12) 44ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:-

**1. ಹೆಸರು ಮತ್ತು ಪ್ರಾರಂಭ.**- (1) ಈ ನಿಯಮಗಳನ್ನು ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ನಿಯಮಗಳು, 1988 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.**- ಕರ್ನಾಟಕ ಲೇವಾದೇವಿದಾರರ ನಿಯಮಗಳು, 1965ರ 5ನೇ ನಿಯಮದಲ್ಲಿ,-

(i) (2) ನೇ ಉಪ ನಿಯಮದಲ್ಲಿ "ಲೈಸೆನ್ಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಎರಡು ತಿಂಗಳೊಳಗಿನ ಯಾವುದೇ ದಿನಾಂಕದಂದು" ಎಂಬ ಪದಗಳಿಗೆ "ಪ್ರತಿ ವರ್ಷ ಅಕ್ಟೋಬರ್ ತಿಂಗಳ ಕೊನೆಯ ದಿನಕ್ಕೆ ಮುಂಚೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) ಹಾಗೆ ತಿದ್ದುಪಡಿಯಾದ (2) ನೇ ಉಪನಿಯಮದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಮೊದಲ ಬಾರಿಗೆ ಲೈಸೆನ್ಸಿನ ಮಂಜೂರಾತಿಗಾಗಿ ಒಂದು ಅರ್ಜಿಯನ್ನು ಆ ವರ್ಷದ ನವೆಂಬರ್ ಮೊದಲ ದಿನದ ಮತ್ತು ಡಿಸೆಂಬರ್ ಮೂವತ್ತೊಂದನೆಯ ದಿನದ ನಡುವೆ ಸಲ್ಲಿಸಿದ್ದರೆ ತರುವಾಯದ ವರ್ಷದ ಒಂದು ಹೊಸ ಲೈಸೆನ್ಸಿಗಾಗಿನ ಅರ್ಜಿಯನ್ನು ಲೈಸೆನ್ಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಲ್ಲಿಸತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ವಿಠ್ಠಲರಾವ್,**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

The above translation of the Karnataka Money Lenders Act 1961 (Act 12 of 1962) and the Karnataka Money Lenders Rules, 1965 shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 970

---

1. ಕರ್ನಾಟಕ ರಾಜ್ಯಪತ್ರ ಭಾಗ IV 2 ಸಿ (i) ವಿಶೇಷ ಸಂಚಿಕೆ ಸಂಖ್ಯೆ 198, ದಿನಾಂಕ 16.3.88 ರಲ್ಲಿ ಪ್ರಕಟಿಸಲಾಗಿದೆ. (ಅಧಿಸೂಚನೆ ಸಂ. ಸಿಎಂಡಬ್ಲ್ಯೂ 1 ಸಿ ಎಂ ಎಲ್ 88, ಬೆಂಗಳೂರು, ದಿನಾಂಕ 10.3.1988).

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 35 ರಾಶಾಪ್ರ 2006, ಬೆಂಗಳೂರು, ದಿನಾಂಕ: 10ನೇ ಮೇ 2006

ಕರ್ನಾಟಕ ಬರ ಪರಿಹಾರ ನಿಧಿ ಅಧಿನಿಯಮ, 1963ರ (1963ರ 32) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಬರ ಪರಿಹಾರ ನಿಧಿ ಅಧಿನಿಯಮ, 1963

### ಪ್ರಕರಣಗಳ ಅನುಕ್ರಮಣಿಕೆ

ಪ್ರಕರಣಗಳು



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1963 ರ ಅಧಿನಿಯಮ 32.–** ಅನಾವೃಷ್ಟಿ, ಪ್ರವಾಹ, ಬೆಂಕಿ ಮತ್ತು ಇತರ ಪ್ರಾಕೃತಿಕ ವಿಕೋಪಗಳಿಂದ ಉಂಟಾಗುವ ಬರ ಅಥವಾ ಸಂಕಷ್ಟಗಳ ಸಂದರ್ಭಗಳಲ್ಲಿ ವೆಚ್ಚಗಳನ್ನು ಭರಿಸುವುದಕ್ಕಾಗಿ, ಹಿಂದಿನ ಮದರಾಸು, ಬಾಂಬೆ, ಹೈದರಾಬಾದ್ ಮತ್ತು ಮೈಸೂರು ರಾಜ್ಯಗಳಲ್ಲಿ ಬರ ಪರಿಹಾರ ನಿಧಿಯನ್ನು ಸ್ಥಾಪಿಸಲಾಗಿತ್ತು. ಹಿಂದಿನ ಕೊಡಗು ಜಿಲ್ಲೆಯಲ್ಲಿ ಯಾವುದೇ ಅಂಥ ನಿಧಿ ಇರಲಿಲ್ಲ. ಬಾಂಬೆ ಮತ್ತು ಮದರಾಸು ರಾಜ್ಯಗಳಲ್ಲಿ ಬರ ಪರಿಹಾರ ನಿಧಿಯನ್ನು, ಕ್ರಮವಾಗಿ, ಬಾಂಬೆ ಬರ ಪರಿಹಾರ ಅಧಿನಿಯಮ, 1936 ಮತ್ತು ಮದರಾಸು ಬರ ಪರಿಹಾರ ಅಧಿನಿಯಮ, 1936ರ ಮೇರೆಗೆ ಸ್ಥಾಪಿಸಲಾಗಿತ್ತು. ಹಿಂದಿನ ಹೈದರಾಬಾದ್ ರಾಜ್ಯದ ನಿಧಿಯನ್ನು ನಿಜಾಮನ ಫರ್ಮಾನು ಮೂಲಕ ಸ್ಥಾಪಿಸಲಾಗಿದ್ದರೆ, ಹಿಂದಿನ ಮೈಸೂರು ರಾಜ್ಯದಲ್ಲಿ ಸರ್ಕಾರದ ಕಾರ್ಯಾಂಗ ಆದೇಶದ ಮೂಲಕ ಸ್ಥಾಪಿಸಲಾಗಿತ್ತು. ರಾಜ್ಯಗಳ ಪುನಾರಚನೆಯ ತರುವಾಯ, 31.10.1956 ರಲ್ಲಿದ್ದಂತೆ ಈ ನಿಧಿಗಳ ಜಮೆಯಲ್ಲಿದ್ದ ಬಾಕಿಗಳನ್ನು ರಾಜ್ಯಗಳ ಪುನಾರಚನೆ ಅಧಿನಿಯಮ, 1956 ರ ಉಪಬಂಧ ಗಳಿಗನುಸಾರವಾಗಿ ನಗದು ಅಥವಾ ಸರ್ಕಾರಿ ಭದ್ರತೆಗಳಲ್ಲಿ ಹೊಸ ಮೈಸೂರು ರಾಜ್ಯಕ್ಕೆ ಹಂಚಲಾಯಿತು. ಎರಡನೇ ಹಣಕಾಸು ಆಯೋಗವೂ ಸಹಾ ಈ ಉದ್ದೇಶಗಳಿಗಾಗಿ ಪ್ರತ್ಯೇಕವಾದ ನಿಧಿಗಳನ್ನು ಸ್ಥಾಪಿಸುವಂತೆ ರಾಜ್ಯ ಸರ್ಕಾರಗಳಿಗೆ ಸಲಹೆ ನೀಡಿತು. ಆದ್ದರಿಂದ, ಹೊಸ ಮೈಸೂರು ರಾಜ್ಯದಲ್ಲಿ ಶಾಸನದ ಮೂಲಕ ಬರ ಪರಿಹಾರ ನಿಧಿಯನ್ನು ಸ್ಥಾಪಿಸುವುದು ಅಗತ್ಯವೆಂದು ಪರಿಗಣಿಸಲಾಯಿತು.

ಆದ್ದರಿಂದ ಈ ವಿಧೇಯಕ.

(ಅಧಿಸೂಚನೆ ಸಂಖ್ಯೆ 4316 ವಿ.ಸ. ದಿನಾಂಕ 16ನೇ ಜೂನ್ 1962 ರಿಂದ ಪಡೆಯಲಾಗಿದೆ.)

## 1963 ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 32

*(1963ರ ನವೆಂಬರ್ ಏಳನೇ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟಿತವಾಗಿದೆ)*

## [1][ಕರ್ನಾಟಕ][1] ಬರ ಪರಿಹಾರ ನಿಧಿ ಅಧಿನಿಯಮ, 1963

(1963ರ ನವೆಂಬರ್ ಒಂದನೇ ದಿನಾಂಕದಂದು ರಾಜ್ಯಪಾಲರ ಅನುಮತಿ ಪಡೆಯಲಾಗಿದೆ)

**ರಾಜ್ಯದಲ್ಲಿ ಅನಾವೃಷ್ಟಿ, ಪ್ರವಾಹ, ಬೆಂಕಿ ಮತ್ತು ಇತರ ಪ್ರಾಕೃತಿಕ ವಿಕೋಪಗಳಿಂದ ಉಂಟಾಗುವ ಬರ ಅಥವಾ ಸಂಕಷ್ಟ ಸಂದರ್ಭಗಳಲ್ಲಿ ವೆಚ್ಚಗಳನ್ನು ಭರಿಸುವುದಕ್ಕಾಗಿ [1][ಕರ್ನಾಟಕ ರಾಜ್ಯ][1] ದಲ್ಲಿ ಒಂದು ನಿಧಿಯ ಸ್ಥಾಪನೆಗಾಗಿ ಮತ್ತು ನಿರ್ವಹಣೆಗಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ರಾಜ್ಯದಲ್ಲಿ ಅನಾವೃಷ್ಟಿ, ಪ್ರವಾಹ, ಬೆಂಕಿ ಮತ್ತು ಇತರ ಪ್ರಾಕೃತಿಕ ವಿಕೋಪಗಳಿಂದ ಉಂಟಾಗುವ ಬರ ಅಥವಾ ಸಂಕಷ್ಟದ ಸಂದರ್ಭಗಳಲ್ಲಿ ವೆಚ್ಚಗಳನ್ನು ಭರಿಸುವುದಕ್ಕಾಗಿ [1][ಕರ್ನಾಟಕ ರಾಜ್ಯ][1] ದಲ್ಲಿ ಒಂದು ನಿಧಿಯ ಸ್ಥಾಪನೆಗಾಗಿ ಮತ್ತು ನಿರ್ವಹಣೆಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಇದು, ಭಾರತ ಗಣರಾಜ್ಯದ ಹದಿನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು :-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಬರ ಪರಿಹಾರ ನಿಧಿ ಅಧಿನಿಯಮ, 1963 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಅಧಿನಿಯಮವನ್ನು 1.7.1964 ರಿಂದ ಜಾರಿಗೆ ಕೊಡಲಾಗಿದೆ. ಅಧಿಸೂಚನೆಯ ಪಾಠವು ಕೊನೆಯ ಪುಟದಲ್ಲಿದೆ.

2. **ವ್ಯಾಖ್ಯೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ನಿಧಿ" ಎಂದರೆ, 3 ನೇ ಪ್ರಕರಣದ ಮೇರೆಗೆ ಸ್ಥಾಪಿತವಾದ [1][ಕರ್ನಾಟಕ ಬರ ಪರಿಹಾರ ನಿಧಿ][1];

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಬಿ) " ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿತವಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಸಿ) "ರಾಜ್ಯ" ಎಂದರೆ, [1][ಕರ್ನಾಟಕ ರಾಜ್ಯ][1]

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

3. **[1][ಕರ್ನಾಟಕ ಬರ ಪರಿಹಾರ ನಿಧಿ][1]ಯ ಸ್ಥಾಪನೆ:-** ಈ ಅಧಿನಿಯಮದ ಪ್ರಾರಂಭದಂದು, ರಾಜ್ಯ ಸರ್ಕಾರವು, [1][ಕರ್ನಾಟಕ ಬರ ಪರಿಹಾರ ನಿಧಿ][1] ಎಂದು ಕರೆಯಲಾಗುವ ನಿಧಿಯೊಂದನ್ನು ರಾಜ್ಯದಲ್ಲಿ ಮತ್ತು ರಾಜ್ಯಕ್ಕಾಗಿ ಸ್ಥಾಪಿಸತಕ್ಕದ್ದು, ಅದು,-

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**(i)** ಬಾಂಬೇ ಬರ ಪರಿಹಾರ ನಿಧಿ ಅಧಿನಿಯಮ, 1936 (1936ರ ಬಾಂಬೆ ಅಧಿನಿಯಮ XIX) ಮತ್ತು ಮದರಾಸು ಬರ ಪರಿಹಾರ ಅಧಿನಿಯಮ, 1936 (1936ರ ಮದರಾಸು ಅಧಿನಿಯಮ XVI) ರ ಮೇರೆಗೆ ಸ್ಥಾಪಿತವಾದ ಬರ ಪರಿಹಾರ ನಿಧಿಗೆ ಸೇರಿದ ಮತ್ತು ರಾಜ್ಯಗಳ ಪುನಾರಚನೆ ಅಧಿನಿಯಮ, 1956 (1956ರ ಕೇಂದ್ರಾಧಿನಿಯಮ 37) ರ 80ನೇ ಪ್ರಕರಣದ ಮೇರೆಗೆ ಉತ್ತರಾಧಿಕಾರಿ ರಾಜ್ಯವೆಂಬಂತೆ [1][ಕರ್ನಾಟಕ ರಾಜ್ಯಕ್ಕೆ][1] ವರ್ಗಾವಣೆಯಾದಂಥ ಸರ್ಕಾರಿ ಭದ್ರತೆಗಳನ್ನು;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**(ii)** ಮೈಸೂರು ಮತ್ತು ಹೈದರಾಬಾದ್ ರಾಜ್ಯಗಳ ಪುನಾರಚನೆಗೆ ಪೂರ್ವದಲ್ಲಿ ಕೇಂದ್ರ ಅಥವಾ ರಾಜ್ಯ ಸರ್ಕಾರಗಳಲ್ಲಿ ಭದ್ರತೆಗಳಲ್ಲಿ ಹೂಡಲಾಗಿದ್ದಂಥ ಮತ್ತು ರಾಜ್ಯಗಳ ಪುನಾರಚನೆ ಅಧಿನಿಯಮ, 1956 (1956ರ ಕೇಂದ್ರಾಧಿನಿಯಮ 37) ರ 80ನೇ ಪ್ರಕರಣದ ಮೇರೆಗೆ ಉತ್ತರಾಧಿಕಾರಿ ರಾಜ್ಯವೆಂಬಂತೆ [1][ಕರ್ನಾಟಕ ರಾಜ್ಯ][1] ಕ್ಕೆ ವರ್ಗಾವಣೆಯಾದ ಬರ ಪರಿಹಾರ ನಿಧಿಯ ಹಣವನ್ನು;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**(iii)** (i) ಮತ್ತು (ii) ನೇ ಖಂಡಗಳಲ್ಲಿ ಉಲ್ಲೇಖಿಸಲಾದ ಭದ್ರತೆಗಳ ಮೇಲೆ ಕಾಲ ಕಾಲಕ್ಕೆ ಸಂಚಿತವಾಗಬಹುದಾದ ಬಡ್ಡಿಯನ್ನು;

**(iv)** ರಾಜ್ಯ ಸರ್ಕಾರವು, 6 ನೇ ಪ್ರಕರಣದ (2)ನೇ ಉಪ ಪ್ರಕರಣದ ಮೇರೆಗೆ ಅಥವಾ ಅನ್ಯಥಾ ಕಾಲ ಕಾಲಕ್ಕೆ ನಿಧಿಗೆ ವಂತಿಗೆಯಾಗಿ ನೀಡುವಂಥ ಮೊತ್ತವನ್ನು; ಮತ್ತು

**(v)** 5ನೇ ಪ್ರಕರಣದ ಮೇರೆಗೆ ಹೂಡಿಕೆ ಅಥವಾ ಮರುಹೂಡಿಕೆ ಮಾಡಲಾದ ನಿಧಿಯ ಭದ್ರತೆಯ ಮೇಲೆ ಕಾಲಕಾಲಕ್ಕೆ ಸಂಚಿತವಾಗಬಹುದಾದ ಬಡ್ಡಿಯನ್ನು

– ಒಳಗೊಳ್ಳತಕ್ಕದ್ದು.

**4. ನಿಧಿಯನ್ನು ಬಳಸಬಹುದಾದ ಉದ್ದೇಶ.–** ನಿಧಿಯನ್ನು ಕೆಳಗೆ ಕಂಡ ಉದ್ದೇಶಗಳಿಗೆ ವೆಚ್ಚಮಾಡತಕ್ಕದ್ದು:

(i) ರಾಜ್ಯದಲ್ಲಿನ ಬರ ಪರಿಹಾರಕ್ಕಾಗಿ; ಮತ್ತು

(ii) ರಾಜ್ಯದಲ್ಲಿ ಅನಾವೃಷ್ಟಿ, ಪ್ರವಾಹ, ಬೆಂಕಿ ಅಥವಾ ಪ್ರಾಕೃತಿಕ ವಿಕೋಪಗಳಿಂದ ಉಂಟಾಗುವ ಸಂಕಷ್ಟಗಳ ಪರಿಹಾರಕ್ಕಾಗಿ:

ಆದರೆ, ನಿಧಿಯು ಅರವತ್ತು ಲಕ್ಷ ರೂಪಾಯಿಗಳನ್ನು ಮೀರಿದಾಗ, ರಾಜ್ಯ ಸರ್ಕಾರವು, ಹೆಚ್ಚುವರಿ ಹಣವನ್ನು, ನಿಯಮಿಸಬಹುದಾದಂಥ ಸಂರಕ್ಷಿತ ಸಣ್ಣ ನೀರಾವರಿ ಕಾಮಗಾರಿಗಳು ಮತ್ತು ಇತರ ಕಾಮಗಾರಿಗಳ ಖರ್ಚು ವೆಚ್ಚಗಳನ್ನು ಭರಿಸುವುದಕ್ಕಾಗಿ ಅಥವಾ ರಾಜ್ಯದಲ್ಲಿನ ಬರ ನಿವಾರಣೆಗಾಗಿ ಅಥವಾ [1][ಕರ್ನಾಟಕ][1] ಭೂ ಅಭಿವೃದ್ಧಿ ಸಾಲಗಳ ಅಧಿನಿಯಮ, 1963 ರ (1963ರ [1][ಕರ್ನಾಟಕ][1] ಅಧಿನಿಯಮ 16) ಮೇರೆಗೆ ಆಗಲಿ, ಅಥವಾ [1][ಕರ್ನಾಟಕ][1] ಕೃಷಿಕರ ಸಾಲಗಳ ಅಧಿನಿಯಮ, 1963ರ (1963ರ [1][ಕರ್ನಾಟಕ][1] ಅಧಿನಿಯಮ 17) ಮೇರೆಗೆ ಆಗಲಿ ಸಾಗುವಳಿದಾರರಿಗೆ ಸಾಲಗಳನ್ನು ಮಂಜೂರು ಮಾಡುವುದಕ್ಕಾಗಿ ಅಥವಾ ಪರಿಹಾರದ ಉದ್ದೇಶಗಳಿಗಾಗಿ ಅಥವಾ ರಾಜ್ಯ ಸರ್ಕಾರದಿಂದ ನೀಡಲಾದ ಮುಂಗಡಗಳ ಮರು ಸಂದಾಯಕ್ಕಾಗಿ, ಸದರಿ ಅಧಿನಿಯಮದ ಮೇರೆಗೆ ಅಥವಾ ಪರಿಹಾರದ ಉದ್ದೇಶಗಳಿಗಾಗಿ ಮಂಜೂರು ಮಾಡಲಾದ ಆದರೆ ವಸೂಲು ಮಾಡಲಾಗದ ಬಾಕಿ ಇರುವ ಸಾಲಗಳನ್ನು ಭರಿಸುವುದಕ್ಕಾಗಿ ಉಪಯೋಗಿಸಬಹುದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**5. ಅಗತ್ಯವಿಲ್ಲದ ಮೊತ್ತಗಳ ಹೂಡಿಕೆ ಮತ್ತು ಮರು ಹೂಡಿಕೆ:–** ರಾಜ್ಯ ಸರ್ಕಾರವು, 4 ನೇ ಪ್ರಕರಣದಲ್ಲಿ ನಮೂದಿಸಲಾಗಿರುವ ಯಾವುದೇ ಉದ್ದೇಶಗಳಿಗೆ ಜರೂರಾಗಿ ಅಗತ್ಯವಿಲ್ಲದಾಗ, ನಿಧಿಯಲ್ಲಿ ಜಮೆಯಾಗಿರುವ ಎಲ್ಲ ಹಣವನ್ನು, ಕಾಲಕಾಲಕ್ಕೆ ಸರ್ಕಾರದ ಭದ್ರತೆಗಳಲ್ಲಿ ಹೂಡಿಕೆ ಅಥವಾ ಮರುಹೂಡಿಕೆ ಮಾಡತಕ್ಕದ್ದು.

**6. ನಿಧಿಯ ಲೆಕ್ಕಪತ್ರಗಳು ಮತ್ತು ನಿಧಿಯಲ್ಲಿನ ಕೊರತೆಯನ್ನು ತುಂಬಿಕೊಡುವುದು:–** (1) ನಿಧಿಯ ಲೆಕ್ಕಪತ್ರಗಳನ್ನು, ಪ್ರತಿಯೊಂದು ಹಣಕಾಸು ವರ್ಷದ ಅಂತ್ಯದಲ್ಲಿ ಸಿದ್ಧಪಡಿಸತಕ್ಕದ್ದು. ನಿಧಿಗೆ ಸೇರಿದ ಭದ್ರತೆಗಳ ಮೌಲ್ಯವನ್ನು, ಅಂಥ ವರ್ಷದ ಕೊನೆಯ ದಿನ ಮಾರುಕಟ್ಟೆಯ ಮೌಲ್ಯಕ್ಕೆ ಲೆಕ್ಕಹಾಕತಕ್ಕದ್ದು.

(2) ಹಾಗೆ ಸಿದ್ಧಪಡಿಸಲಾದ ಲೆಕ್ಕಪತ್ರಗಳು ಅಂಥ ವರ್ಷದ ಕೊನೆಯಲ್ಲಿನ ನಿಧಿಯ ಬಾಕಿಯು ಅರವತ್ತು ಲಕ್ಷ ರೂಪಾಯಿಗಳ ಕೊರತೆಯನ್ನು ತೋರಿಸಿದರೆ, ಆ ಕೊರತೆಯನ್ನು ರಾಜ್ಯದ ಸಂಚಿತ ನಿಧಿಯಿಂದ ತುಂಬತಕ್ಕದ್ದು:

ಆದರೆ, ಕೊರತೆಯು ಇಪ್ಪತ್ತು ಲಕ್ಷ ರೂಪಾಯಿಗಳನ್ನು ಮೀರಿದರೆ, ಅದನ್ನು ವಾರ್ಷಿಕ ಕಂತುಗಳಲ್ಲಿ ತುಂಬಬಹುದು. ಅಂಥ ಕಂತುಗಳ ಮೊತ್ತವು ಕೊನೆಯ ಕಂತನ್ನು ಹೊರತುಪಡಿಸಿ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

(3) (2)ನೇ ಉಪ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಿಂದ ಭರಿಸಲಾದ ಯಾವುದೇ ವೆಚ್ಚವನ್ನು ರಾಜ್ಯದ ಸಂಚಿತ ನಿಧಿಯ ಲೆಕ್ಕಕ್ಕೆ ಸೇರಿಸತಕ್ಕದ್ದು.

**7. ನಿಯಮಗಳ ರಚನಾಧಿಕಾರ:–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಒಟ್ಟು ಮೂವತ್ತು ದಿನಗಳ ಅವಧಿಯ ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಧಿವೇಶನಗಳಲ್ಲಿ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ಅಧಿವೇಶನ ಅಥವಾ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಎರಡೂ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಎರಡೂ ಸದನಗಳು ಆ ನಿಯಮವನ್ನು ರಚಿಸಕೂಡದೆಂದು ಒಪ್ಪಿದರೆ, ಆ ನಿಯಮವು ಆ ತರುವಾಯ, ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಜಾರಿಗೊಳ್ಳತಕ್ಕದ್ದು ಅಥವಾ ಜಾರಿಗೊಳ್ಳತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಮಾನ್ಯತೆಗೆ ಪ್ರತಿಕೂಲವಾಗಿರತಕ್ಕದ್ದಲ್ಲ.

**ಅಧಿಸೂಚನೆ**

**ಬೆಂಗಳೂರು, ದಿನಾಂಕ 29 ನೇ ಜೂನ್, 1964 (ಸಂಖ್ಯೆ ಆರ್ ಡಿ ಎಫ್ 7 ಟಿ ಇ ಎಂ 63)**

**ಎಸ್. ಓ. 855.–** [1][ಕರ್ನಾಟಕ] ಬರಪರಿಹಾರ ನಿಧಿ ಅಧಿನಿಯಮ, 1963 ರ (1963ರ [1][ಕರ್ನಾಟಕ] ಅಧಿನಿಯಮ 32) 1 ನೇ ಪ್ರಕರಣದ (3) ನೇ ಉಪ ಪ್ರಕರಣದಿಂದ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1963 ನೇ ಜುಲೈ ಒಂದನೇ ದಿನಾಂಕವು ಸದರಿ ಅಧಿನಿಯಮವು ಜಾರಿಯಲ್ಲಿ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ ಸೀತಾರಾಮನ್**
ಉಪ ಕಾರ್ಯದರ್ಶಿ (ಪ್ರಭಾರ).

The above translation of the Karnataka Famine Relief Fund Act 1963 (Act 32 of 1963) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 971

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 36 ರಾಶಾಪ್ರ 2006, ಬೆಂಗಳೂರು, ದಿನಾಂಕ: 10ನೇ ಮೇ 2006**

ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984ರ (1984ರ 37) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**I**

**1984ರ ಅಧಿನಿಯಮ 37.–** ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕೆ ಕ್ಯಾಪಿಟೇಷನ್ ಶುಲ್ಕವನ್ನು ವಸೂಲು ಮಾಡುವ ಪದ್ಧತಿ ರಾಜ್ಯದಲ್ಲಿ ಬಹಳ ವ್ಯಾಪಕವಾಗಿದೆ.

ಈ ಅನಪೇಕ್ಷಿತ ಪದ್ಧತಿಯು ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣದ ವಾಣಿಜ್ಯೀಕರಣಕ್ಕೆ ಅವಕಾಶ ಕಲ್ಪಿಸುವುದರ ಜೊತೆಗೆ ಶಿಕ್ಷಣದ ಗುಣಮಟ್ಟವನ್ನು ಕಾಪಾಡಲು ಅನುಕೂಲಕರವಾಗಿಲ್ಲ.

ಸಾರ್ವಜನಿಕ ಹಿತದೃಷ್ಟಿಯಿಂದ ಈ ಅನಿಷ್ಟ ಪದ್ಧತಿಯನ್ನು ಪರಿಣಾಮಕಾರಿಯಾಗಿ ತಡೆಗಟ್ಟುವುದು ಮತ್ತು ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕಾಗಿ ಕ್ಯಾಪಿಟೇಷನ್ ಶುಲ್ಕ ವಸೂಲಿ ಮಾಡುವುದನ್ನು ನಿಷೇಧಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ವಿನಿಯಮಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ವಿಷಯವು ಬಹಳ ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ವಿಧಾನ ಮಂಡಲದ ಯಾವುದೇ ಸದನವು ಅಧಿವೇಶನದಲ್ಲಿಲ್ಲದಿದ್ದುದರಿಂದ ಒಂದು ಅಧ್ಯಾದೇಶವನ್ನು ಹೊರಡಿಸಲಾಯಿತು.

ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

( ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ದಿನಾಂಕ 25.1.1984ರಲ್ಲಿ ಸಂಖ್ಯೆ 70 ಎಂದು ಪುಟ 10 ರಲ್ಲಿ ಪ್ರಕಟಿಸಲಾಗಿದೆ.)

**II**

**1985ರ ತಿದ್ದುಪಡಿ ಮಾಡುವ ಅಧಿನಿಯಮ 17.–** ವಿಧಾನ ಮಂಡಲದ ಉಭಯ ಸದನಗಳಿಂದ ಅನುಮೋದನೆ ಪಡೆದ 1984ರ ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ವಿಧೇಯಕವನ್ನು ಭಾರತ ಸಂವಿಧಾನದ 200ನೇ ಅನುಚ್ಛೇದದ ಮೇರೆಗೆ ರಾಷ್ಟ್ರಪತಿಯವರ ಪರಿಗಣನೆಗಾಗಿ ಕರ್ನಾಟಕ ರಾಜ್ಯಪಾಲರು ಕಾದಿರಿಸಿದ್ದರು. ವಿಧೇಯಕವು ರಾಷ್ಟ್ರಪತಿಯವರ ಅನುಮತಿಯ ನಿರೀಕ್ಷೆಯಲ್ಲಿರುವಾಗ ಪ್ರತಿಸ್ಥಾಪಿಸಲು ಉದ್ದೇಶಿಸಿದ 1983ರ ಅಧ್ಯಾದೇಶ 14ರ ಅವಧಿ ಮುಕ್ತಾಯವಾಯಿತು ಹಾಗೂ ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧ್ಯಾದೇಶ,

1984 (1984ರ ಕರ್ನಾಟಕ ಅಧ್ಯಾದೇಶ 8) ನ್ನು ವಿಧೇಯಕದಲ್ಲಿ ಗಣನಾರ್ಹವಾಗಿ ಇರುವಂಥಹವೇ ಉಪಬಂಧಗಳೊಂದಿಗೆ 11ನೇ ಜುಲೈ 1983ರಿಂದ ಜಾರಿಗೆ ಬರುವಂತೆ ಹೊರಡಿಸುವುದು ಅವಶ್ಯವಾಯಿತು. ಇದನ್ನು 1983ರ ಕರ್ನಾಟಕ ಅಧ್ಯಾದೇಶದ ಮೇರೆಗೆ ಹೊರಡಿಸಲಾದ ಅಥವಾ ಸಿಂಧುಗೊಳಿಸಲಾದ ನಿಯಮಗಳು, ಆದೇಶಗಳು ಮತ್ತು ಅಧಿಸೂಚನೆಗಳಿಗೆ ಮತ್ತು 1984 – 85ನೇ ಸಾಲಿನ ಶೈಕ್ಷಣಿಕ ವರ್ಷಕ್ಕಾಗಿ ಹೊರಡಿಸಲಾದ ಅಥವಾ ಹೊರಡಿಸಬೇಕಾದ ವಿಷಯದ ಮೇಲೆ ನಿಯಮಗಳು, ಆದೇಶಗಳು ಮತ್ತು ಅಧಿಸೂಚನೆಗಳಿಗೆ ಕಾನೂನಿನ ಸಿಂಧುತ್ವವನ್ನು ಒದಗಿಸಲು ಅದನ್ನು 9ನೇ ಜುಲೈ 1984ರಂದು ಜಾರಿಗೊಳಿಸಲಾಯಿತು.

ತರುವಾಯ ವಿಧೇಯಕಕ್ಕೆ ರಾಷ್ಟ್ರಪತಿಯವರ ಅನುಮತಿ ದೊರೆಯಿತು ಮತ್ತು 9ನೇ ಆಗಸ್ಟ್ 1984 ರಂದು ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984 (1984ರ ಕರ್ನಾಟಕ ಅಧಿನಿಯಮ 37) ಎಂಬುದಾಗಿ ಅದನ್ನು ಪ್ರಕಟಿಸಲಾಯಿತು. ಆದ್ದರಿಂದ, ಅದರ ಮೂಲಕ ತೆಗೆದುಕೊಂಡ ಕ್ರಮವನ್ನು ಅಥವಾ ಸಿಂಧುತ್ವವನ್ನು ಉಳಿಸಿ 1984ರ ಕರ್ನಾಟಕ ಅಧ್ಯಾದೇಶ 8 ನ್ನು ನಿರಸನಗೊಳಿಸಬೇಕಾಯಿತು.

ರಾಷ್ಟ್ರಪತಿಯವರ ಅನುಮತಿಯನ್ನು ತಿಳಿಸುವಾಗ ಭಾರತ ಸರ್ಕಾರವು, 1983ರ ಕರ್ನಾಟಕ ಅಧ್ಯಾದೇಶ 14 ರದ್ದಾದ ನಂತರ, ಆದರೆ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿನಿಯಮವು ಪ್ರಕಟವಾದ ದಿನಾಂಕಕ್ಕೆ ಮುಂಚೆ, ಅಧಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಯು, ಅಪರಾಧಗಳನ್ನು ಪೂರ್ವಾನ್ವಯವಾಗಿ ಸೃಜಿಸಲು ಸಾಧ್ಯವಾಗದಿರುವುದರಿಂದ, ಅಧಿನಿಯಮದ 7 ಅಥವಾ 8ನೇ ಪ್ರಕರಣದ ಮೇರೆಗೆ ದಂಡನೀಯವಾಗತಕ್ಕದ್ದಲ್ಲ ಎನಿಸುವಷ್ಟರ ಮಟ್ಟಿಗೆ ಅಧಿನಿಯಮವನ್ನು ತಿದ್ದುಪಡಿ ಮಾಡಬಹುದೆಂದೂ ಸಹ ನಿರ್ದೇಶನಗಳನ್ನು ನೀಡಿತ್ತು.

1984ರ ಕರ್ನಾಟಕ ಅಧ್ಯಾದೇಶ 8 ನ್ನು ನಿರಸನಗೊಳಿಸುವ ಮತ್ತು ಅಧಿನಿಯಮವನ್ನು ಭಾರತ ಸರ್ಕಾರದ ನಿರ್ದೇಶನಗಳಿಗನುಸಾರವಾಗಿ ತಿದ್ದುಪಡಿ ಮಾಡುವ ಮತ್ತು ಕೈಗೊಂಡ ಕಾರ್ಯದ ಸಿಂಧುತ್ವವನ್ನು ಅಥವಾ 1984ರ ಕರ್ನಾಟಕ ಅಧ್ಯಾದೇಶ 8 ರ ಮೂಲಕ ಸಿಂಧುಗೊಂಡಿರುವುದೂ ಸೇರಿದಂತೆ, ಅಧಿನಿಯಮಕ್ಕೆ ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡುವ ಸಲುವಾಗಿ, 1984ರ ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) (ತಿದ್ದುಪಡಿ) ಅಧ್ಯಾದೇಶವನ್ನು 9ನೇ ಆಗಸ್ಟ್ 1984ರಂದು, 1984ರ ಕರ್ನಾಟಕ ಅಧ್ಯಾದೇಶ 10 ಎಂಬುದಾಗಿ ಘೋಷಿಸಲಾಯಿತು. ಸದರಿ ಅಧ್ಯಾದೇಶವು 1985ರ ಜನವರಿ 10ನೇ ದಿನಾಂಕದಂದು ಕೊನೆಗೊಂಡಿದ್ದರಿಂದ, ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) (ತಿದ್ದುಪಡಿ) ಅಧ್ಯಾದೇಶ, 1985 (1985ರ ಕರ್ನಾಟಕ ಅಧ್ಯಾದೇಶ 2) ನ್ನು ಘೋಷಿಸಲಾಯಿತು. ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ IV 2ಎನಲ್ಲಿ ದಿನಾಂಕ 25.3.1985ರಲ್ಲಿ ಸಂಖ್ಯೆ 163 ಎಂದು ಪುಟ 5 – 6 ರಲ್ಲಿ ಪ್ರಕಟಿಸಲಾಗಿದೆ.)

## III

**2003ರ ತಿದ್ದುಪಡಿ ಮಾಡುವ ಅಧಿನಿಯಮ 15.–** ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕಾಗಿ ಕ್ಯಾಪಿಟೇಷನ್ ಶುಲ್ಕವನ್ನು ವಸೂಲಿ ಮಾಡುವ ಅನಿಷ್ಟ ಪದ್ಧತಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಪರಿಣಾಮಕಾರಿಯಾಗಿ ತಡೆಗಟ್ಟಲು ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳನ್ನು ವಿನಿಯಮಿಸಲು ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984 (1984ರ ಕರ್ನಾಟಕ ಅಧಿನಿಯಮ 37) 11ನೇ ಜುಲೈ 1983 ರಿಂದ ಜಾರಿಗೆ ಬಂದಿದೆ. ಸದರಿ ಅಧಿನಿಯಮದ 2ನೇ ಪ್ರಕರಣದ (ಸಿ) ಖಂಡದಲ್ಲಿ, ಶಿಕ್ಷಣ ಸಂಸ್ಥೆಯನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 1976 (1976ರ ಕರ್ನಾಟಕ ಅಧಿನಿಯಮ 28)ರ ಅಡಿಯಲ್ಲಿ ಸ್ಥಾಪಿಸಲಾದ ವಿಶ್ವ ವಿದ್ಯಾಲಯದ ಮೂಲಕ ಪದವಿಯನ್ನು ಪ್ರದಾನ ಮಾಡುವುದಕ್ಕೆ ಅವಕಾಶ ಕಲ್ಪಿಸುವ ಒಂದು ಸಂಸ್ಥೆ ಎಂದು ಪರಿಭಾಷಿಸಲಾಗಿದೆ. ಸದರಿ ಅಧಿನಿಯಮದ ರಚನೆಯ ತರುವಾಯ, ಕನ್ನಡ ವಿಶ್ವ ವಿದ್ಯಾಲಯ ಅಧಿನಿಯಮ, 1991, ಕರ್ನಾಟಕ ರಾಜ್ಯ ಮುಕ್ತ ವಿಶ್ವ ವಿದ್ಯಾಲಯ ಅಧಿನಿಯಮ, 1992, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವ ವಿದ್ಯಾಲಯ ಅಧಿನಿಯಮ, 1994 ಮತ್ತು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವ ವಿದ್ಯಾಲಯ ಅಧಿನಿಯಮ, 1994 ಇವು ಅಧಿನಿಯಮಿತವಾಗಿವೆ ಮತ್ತು 1963ರ ಕರ್ನಾಟಕ ಕೃಷಿ ವಿಜ್ಞಾನಗಳ ವಿಶ್ವ ವಿದ್ಯಾಲಯ ಅಧಿನಿಯಮವು ಶಿಕ್ಷಣ ಸಂಸ್ಥೆಯ ಪರಿಭಾಷೆಯ ವ್ಯಾಪ್ತಿಯೊಳಗೆ ಸೇರಿರಲಿಲ್ಲ. ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸ್ಥಾಪಿಸಲಾದ ವಿಶ್ವ ವಿದ್ಯಾಲಯವು ಪ್ರದಾನ ಮಾಡುವ ಪದವಿಗೆ ಅವಕಾಶ ಕಲ್ಪಿಸುವ ಎಲ್ಲ ಶಿಕ್ಷಣ ಸಂಸ್ಥೆಗಳನ್ನು ಈ ವ್ಯಾಪ್ತಿಯೊಳಗೆ ತರುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿ.ಸ. ವಿಧೇಯಕ ಸಂಖ್ಯೆ 2002 ರ 18)

## 1984ರ ಕರ್ನಾಟಕ ಅಧಿನಿಯಮ ಸಂಖ್ಯೆ 37

*(1984ರ ಆಗಸ್ಟ್ ಒಂಬತ್ತನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)*

## ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984

*(1984ರ ಜುಲೈ ಇಪ್ಪತ್ತನೇ ದಿನದಂದು ರಾಷ್ಟ್ರಪತಿಯವರ ಅನುಮತಿ ಪಡೆದಿದೆ)*

( ಅಧಿನಿಯಮ ಸಂಖ್ಯೆ 1985ರ 17 ಮತ್ತು 2003ರ 15 – ಇವುಗಳ ಮೂಲಕ ತಿದ್ದುಪಡಿಯಾದಂತೆ)

**ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ನೀಡುವುದಕ್ಕಾಗಿ ಕ್ಯಾಪಿಟೇಷನ್ ಶುಲ್ಕ ವಸೂಲಿ ಮಾಡುವುದನ್ನು ನಿಷೇಧಿಸುವ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಒಂದು ಅಧಿನಿಯಮ.**

ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವುದಕ್ಕಾಗಿ ಕ್ಯಾಪಿಟೇಷನ್ ಶುಲ್ಕ ವಸೂಲಿ ಮಾಡುವ ಪದ್ಧತಿಯು ರಾಜ್ಯದಲ್ಲಿ ವ್ಯಾಪಕವಾಗಿರುವುದರಿಂದ;

ಮತ್ತು ಈ ಅನಪೇಕ್ಷಿತ ಪದ್ಧತಿಯು ಶಿಕ್ಷಣವನ್ನು ಹೆಚ್ಚಿನ ಪ್ರಮಾಣದಲ್ಲಿ ವಾಣಿಜ್ಯೀಕರಣಗೊಳಿಸುವುದರ ಜೊತೆಗೆ ಶಿಕ್ಷಣದ ಗುಣಮಟ್ಟವನ್ನು ಕಾಪಾಡಲು ಅನುಕೂಲಕರವಾಗಿಲ್ಲದಿರುವುದರಿಂದ ;

ಮತ್ತು ಕ್ಯಾಪಿಟೇಷನ್ ಶುಲ್ಕ ವಸೂಲಿಯ ನಿಷೇಧ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಉಪಬಂಧ ಕಲ್ಪಿಸುವ ಮೂಲಕ ಸಾರ್ವಜನಿಕ ಹಿತದೃಷ್ಟಿಯಿಂದ ಈ ಅನಿಷ್ಟ ಪದ್ಧತಿಯನ್ನು ಪರಿಣಾಮಕಾರಿಯಾಗಿ ತಡೆಗಟ್ಟುವುದು ಅಗತ್ಯವೆಂದು ಪರಿಗಣಿಸಿರುವುದರಿಂದ;

ಇದು ಭಾರತ ಗಣರಾಜ್ಯದ ಮೂವತ್ತನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:–

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧಿನಿಯಮ, 1984 ಎಂದು ಕರೆಯತಕ್ಕದ್ದು.

[1](2) ಈ ಪ್ರಕರಣ, 15ನೇ ಪ್ರಕರಣದ (ಸಿ) ಖಂಡ ಮತ್ತು 16ನೇ ಪ್ರಕರಣದ (2) ಮತ್ತು (4)ನೇ ಉಪ ಪ್ರಕರಣಗಳು ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಉಳಿದ ಉಪಬಂಧಗಳು, 1983ರ ಜುಲೈ 11ನೇ ದಿನಾಂಕದಿಂದ ಜಾರಿಯಲ್ಲಿ ಬಂದಿರುವುದಾಗಿ ಭಾವಿಸತಕ್ಕದ್ದು ][1]

**1. 1985ರ ಅಧಿನಿಯಮ 17ರ ಮೂಲಕ 9.8.1984ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.**

**2. ವ್ಯಾಖ್ಯೆ.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಹಿಂದುಳಿದ ವರ್ಗಗಳು" ಎಂದರೆ, ಭಾರತ ಸಂವಿಧಾನದ 15ನೇ ಅನುಚ್ಛೇದದ 4ನೇ ಖಂಡದ ಉದ್ದೇಶಗಳಿಗಾಗಿ ಸರ್ಕಾರದಿಂದ ಮಾನ್ಯತೆ ಪಡೆದಿರುವ ಮತ್ತು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ನಾಗರಿಕರ ಯಾವುವೇ ವರ್ಗಗಳು;

(ಬಿ) "ಕ್ಯಾಪಿಟೇಷನ್ ಶುಲ್ಕ" ಎಂದರೆ, 5ನೇ ಪ್ರಕರಣದ ಮೇರೆಗೆ ನಿಗದಿಪಡಿಸಲಾದ ಶುಲ್ಕಕ್ಕಿಂತ ಅಧಿಕವಾಗಿ, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಂದಾಯ ಮಾಡಿದ ಅಥವಾ ವಸೂಲಿ ಮಾಡಿದ, ಯಾವುದೇ ಹೆಸರಿನಿಂದ ಕರೆಯಲಾಗುವ ಯಾವುದೇ ಮೊಬಲಗು, ಆದರೆ ಇದರಲ್ಲಿ 3ನೇ ಪ್ರಕರಣದ ಪರಂತುಕದ ಮೇರೆಗೆ ನಿರ್ದಿಷ್ಟಪಡಿಸಲಾದ ಠೇವಣಿಯು ಒಳಗೊಳ್ಳುವುದಿಲ್ಲ ;

(ಸಿ) "ಶಿಕ್ಷಣ ಸಂಸ್ಥೆ" ಎಂದರೆ, [1][ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸ್ಥಾಪಿತವಾದ ವಿಶ್ವ ವಿದ್ಯಾನಿಲಯದಿಂದ][1] ಪದವಿ ನೀಡಿಕೆಗೆ ಅವಕಾಶ ಕಲ್ಪಿಸುವ, ವೈದ್ಯಕೀಯ ಅಥವಾ ಇಂಜಿನಿಯರಿಂಗ್ ಶಿಕ್ಷಣವನ್ನು ನೀಡುವ ಕಾರ್ಯವನ್ನು ನಿರ್ವಹಿಸುವ ಸರ್ಕಾರ, ಖಾಸಗಿ ನಿಕಾಯ, ಸ್ಥಳೀಯ ಪ್ರಾಧಿಕಾರ, ನ್ಯಾಸ, ವಿಶ್ವ ವಿದ್ಯಾನಿಲಯ ಅಥವಾ ಯಾರೇ ಇತರ ವ್ಯಕ್ತಿಯು ನಿರ್ವಹಿಸುವ, ಯಾವುದೇ ಹೆಸರಿನಿಂದ ಕರೆಯಲಾಗುವ ಯಾವುದೇ ಸಂಸ್ಥೆ ಮತ್ತು ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಯಾವುದೇ ಇತರ ಶಿಕ್ಷಣ ಸಂಸ್ಥೆ ಅಥವಾ ಅಂಥ ಸಂಸ್ಥೆಯ ವರ್ಗ ಅಥವಾ ವರ್ಗಗಳು ;

**1. 2003ರ ಅಧಿನಿಯಮ 15ರ ಮೂಲಕ 5.4.2003ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.**

(ಡಿ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ ;

(ಇ) "ಸರ್ಕಾರಿ ಸೀಟುಗಳು" ಎಂದರೆ, ಕ್ಯಾಪಿಟೇಷನ್ ಶುಲ್ಕ ಅಥವಾ ನಗದು ಠೇವಣಿಯ ಸಂದಾಯದ ಅಗತ್ಯವಿಲ್ಲದೆ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತೆ, ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಹಿಂದುಳಿದ ವರ್ಗಗಳು ಮತ್ತು ಅಂಥ ಇತರ ಪ್ರವರ್ಗಗಳಿಗೆ ಯೋಗ್ಯತೆ ಮತ್ತು ಮೀಸಲಾತಿಯ ಆಧಾರದ ಮೇಲೆ, ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಭರ್ತಿ ಮಾಡಲು ಸರ್ಕಾರವು ಕಾಲಕಾಲಕ್ಕೆ

ನಿರ್ದಿಷ್ಟಪಡಿಸಬಹುದಾದಂತೆ, ರಾಜ್ಯದಲ್ಲಿನ ಅಂಥ ಶಿಕ್ಷಣ ಸಂಸ್ಥೆಗಳಲ್ಲಿ ಅಥವಾ ಅಂಥ ಸಂಸ್ಥೆಗಳ ವರ್ಗ ಅಥವಾ ವರ್ಗಗಳಲ್ಲಿನ ಅಷ್ಟು ಸಂಖ್ಯೆಯ ಸೀಟುಗಳು;

(ಎಫ್) "ಆಡಳಿತ" ಎಂದರೆ, ಒಂದು ಶಿಕ್ಷಣ ಸಂಸ್ಥೆಯ ವ್ಯವಹಾರಗಳನ್ನು ವಹಿಸಿಕೊಡಲಾಗಿರುವ, ಯಾವುದೇ ಹೆಸರಿನಿಂದ ಕರೆಯಲಾಗುವ, ಆ ಸದರಿ ಸಂಸ್ಥೆಯ ಆಡಳಿತ ಸಮಿತಿ ಅಥವಾ ಆಡಳಿತ ಮಂಡಳಿ; ಮತ್ತು ಅದು, ಅಂಥ ವ್ಯವಹಾರಗಳನ್ನು ಯಾರೇ ವ್ಯಕ್ತಿಗೆ ವಹಿಸಿಕೊಡಲಾಗಿರುವಲ್ಲಿ, ಅವನನ್ನು ಕಾರ್ಯದರ್ಶಿ, ಭಾತ್ಮಿದಾರ ಅಥವಾ ಯಾವುದೇ ಇತರ ಹೆಸರಿನಿಂದ ಕರೆದಿರಲಿ ಅಂಥ ವ್ಯಕ್ತಿಯನ್ನು ಸಹ ಒಳಗೊಳ್ಳುತ್ತದೆ;

(ಜಿ) "ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಗಳು" ಎಂದರೆ, ಭಾರತ ಸಂವಿಧಾನದ ಅನುಚ್ಛೇದ 30ರ ಅಡಿಯಲ್ಲಿ ಉಪಬಂಧಿಸಲಾದಂತೆ ಅಲ್ಪ ಸಂಖ್ಯಾತರಿಂದ ಸ್ಥಾಪಿತವಾದ ಮತ್ತು ಆಡಳಿತ ನಡೆಸಲಾಗುತ್ತಿರುವ ಶಿಕ್ಷಣ ಸಂಸ್ಥೆಗಳು; ಮತ್ತು

(ಹೆಚ್) "ಅನುಸೂಚಿತ ಜಾತಿಗಳು" ಮತ್ತು "ಅನುಸೂಚಿತ ಬುಡಕಟ್ಟುಗಳು" ಭಾರತ ಸಂವಿಧಾನದ 366ನೇ ಅನುಚ್ಛೇದದ (24) ನೇ ಮತ್ತು (25)ನೇ ಖಂಡದಲ್ಲಿ ಅವುಗಳಿಗೆ ಅನುಕ್ರಮವಾಗಿ ನೀಡಲಾದಂಥ ಅರ್ಥವನ್ನೇ ಹೊಂದಿರತಕ್ಕದ್ದು.

3. **ಕ್ಯಾಪಿಟೇಷನ್ ಶುಲ್ಕ ವಸೂಲಿಯ ನಿಷೇಧ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಶಿಕ್ಷಣ ಸಂಸ್ಥೆಯು ಅಥವಾ ಅದರ ಪರವಾಗಿ ಅಥವಾ ಅಂಥ ಸಂಸ್ಥೆಯ ಆಡಳಿತ ಪ್ರಭಾರದಲ್ಲಿರುವ ಅಥವಾ ಜವಾಬ್ದಾರಿ ಹೊಂದಿರುವ ಯಾರೇ ವ್ಯಕ್ತಿಯು ಯಾವುದೇ ಕ್ಯಾಪಿಟೇಷನ್ ಶುಲ್ಕವನ್ನು ವಸೂಲು ಮಾಡತಕ್ಕದ್ದಲ್ಲ:

ಆದರೆ, ವಿಧಿಸಬಹುದಾದಂಥ ನಿಯಮಗಳಿಗೆ ಅಥವಾ ಕಾಲಕಾಲಕ್ಕೆ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಸರ್ಕಾರವು, ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮವು ಅಸ್ತಿತ್ವಕ್ಕೆ ಬಂದ ದಿನಾಂಕಕ್ಕೆ ಮುಂಚೆ ಸ್ಥಾಪಿತವಾದ ಮತ್ತು ಕ್ಯಾಪಿಟೇಷನ್ ಶುಲ್ಕವೆಂದು ವಸೂಲು ಮಾಡಿದ ಮೊಬಲಗಿನಿಂದ ನಿರ್ವಹಿಸಲಾದ ಅಥವಾ ಏಕಮಾತ್ರವಾಗಿ ಅಥವಾ ಗಣನೀಯವಾಗಿ ಅಭಿವೃದ್ಧಿ ಹೊಂದಿದ ಯಾವುದೇ ಶಿಕ್ಷಣ ಸಂಸ್ಥೆಗೆ ಅಥವಾ ಅಂಥ ಸಂಸ್ಥೆಗಳ ಯಾವುದೇ ವರ್ಗ ಅಥವಾ ವರ್ಗಗಳಿಗೆ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ , ಅಷ್ಟರ ಮಟ್ಟಿಗೆ ಮತ್ತು ಅಂಥ ಅವಧಿಯವರೆಗೆ ಅಂಥ ಕ್ಯಾಪಿಟೇಷನ್ ಶುಲ್ಕವನ್ನು ಅಥವಾ ನಗದು ಠೇವಣಿಗಳನ್ನು ಸ್ವೀಕರಿಸುವುದನ್ನು ಮುಂದುವರಿಸಲು ಅನುಮತಿ ನೀಡಬಹುದು. ಆದಾಗ್ಯೂ, ಅಂಥ ಅವಧಿಯನ್ನು, ಯಾವುದೇ ಸಂದರ್ಭದಲ್ಲಿ ಅಂಥ ದಿನಾಂಕದಿಂದ ಐದು ವರ್ಷಗಳನ್ನು ಮೀರಿ ವಿಸ್ತರಿಸತಕ್ಕದ್ದಲ್ಲ.

4. **ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶದ ನಿಯಂತ್ರಣ, ಇತ್ಯಾದಿ.–** ಸರ್ಕಾರವು ಈ ಸಂಬಂಧದಲ್ಲಿ ಮಾಡಬಹುದಾದಂಥ ನಿಯಮಗಳು ಅಥವಾ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿಗೆ ಒಳಪಟ್ಟು,–

(1) (ಎ) ಒಂದು ಶಿಕ್ಷಣ ಸಂಸ್ಥೆಯಲ್ಲಿ ಯಾವುದೇ ಅಧ್ಯಯನದ ವ್ಯಾಸಂಗ ಕ್ರಮಕ್ಕೆ ಪ್ರವೇಶ ಪಡೆಯಲು ಕನಿಷ್ಠ ವಿದ್ಯಾರ್ಹತೆಯು,–

(i) ವಿಶ್ವ ವಿದ್ಯಾನಿಲಯವು ನಿರ್ವಹಿಸುವ ಅಥವಾ ಅದಕ್ಕೆ ಸಂಯೋಜನೆಗೊಂಡ ಒಂದು ಶಿಕ್ಷಣ ಸಂಸ್ಥೆಯಲ್ಲಿ ಯಾವುದೇ ಅಧ್ಯಯನ ಕ್ರಮದ ಸಂದರ್ಭದಲ್ಲಿ, ಅಂಥ ವಿಶ್ವ ವಿದ್ಯಾನಿಲಯವು ನಿರ್ದಿಷ್ಟ ಪಡಿಸಬಹುದಾದಂತೆ ಇರತಕ್ಕದ್ದು :

ಆದರೆ, ಸರ್ಕಾರವು ಶಿಕ್ಷಣದ ಶ್ರೇಷ್ಠತೆಯ ದೃಷ್ಟಿಯಿಂದ ಯಾವುದೇ ಅಧ್ಯಯನದ ವ್ಯಾಸಂಗ ಕ್ರಮಕ್ಕೆ ಯಾವುದೇ ಉನ್ನತ ಕನಿಷ್ಠ ವಿದ್ಯಾರ್ಹತೆಯನ್ನು ನಿಗದಿಪಡಿಸಬಹುದು;

(ii) ಯಾವುದೇ ಇತರ ಶಿಕ್ಷಣ ಸಂಸ್ಥೆಯಲ್ಲಿನ ಇತರ ಅಧ್ಯಯನದ ವ್ಯಾಸಂಗ ಕ್ರಮಗಳ ಸಂದರ್ಭದಲ್ಲಿ ಸರ್ಕಾರವು ನಿರ್ದಿಷ್ಟಪಡಿಸುವಂತಿರತಕ್ಕದ್ದು;

(ಬಿ) ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಯನ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡಬೇಕಾದ ವಿದ್ಯಾರ್ಥಿಗಳ ಗರಿಷ್ಠ ಸಂಖ್ಯೆಯು, ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂತೆ ಇರತಕ್ಕದ್ದು.

(2) 3ನೇ ಪ್ರಕರಣದ ನಿಬಂಧನೆಯ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಅವಧಿಯಲ್ಲಿ ವಿಧಿಸಲಾದ ಅಥವಾ ವಸೂಲು ಮಾಡಲಾದ ಕ್ಯಾಪಿಟೇಷನ್ ಶುಲ್ಕವನ್ನು ನಿಯಂತ್ರಿಸುವ ಸಲುವಾಗಿ ಸರ್ಕಾರವು ಕಾಲಕಾಲಕ್ಕೆ, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಪ್ರತಿಯೊಂದು ಖಾಸಗಿ ಶಿಕ್ಷಣ ಸಂಸ್ಥೆ ಅಥವಾ ಅಂಥ ಸಂಸ್ಥೆಗಳ ವರ್ಗ ಅಥವಾ ವರ್ಗಗಳಿಗೆ ಸಂಬಂಧಿಸಿದಂತೆ,–

(ಎ) ಸರ್ಕಾರಿ ಸೀಟುಗಳೆಂದು ನಿಗದಿಪಡಿಸಿದಷ್ಟು ಸಂಖ್ಯೆಯ ಸೀಟುಗಳನ್ನು ;

(ಬಿ) ಅಂಥ ಸಂಸ್ಥೆಯ ಆಡಳಿತ ವರ್ಗವು ಭರ್ತಿ ಮಾಡಬಹುದಾದಷ್ಟು ಸಂಖ್ಯೆಯ ಸೀಟುಗಳನ್ನು,–

(i) ಅರ್ಹತೆಯ ಆಧಾರದ ಮೇಲೆ ಕರ್ನಾಟಕ ವಿದ್ಯಾರ್ಥಿಗಳ ವರ್ಗದಿಂದ ಅದರಲ್ಲಿ ನಿರ್ದಿಷ್ಟಪಡಿಸಬಹುದಾದಷ್ಟು ವರ್ಷಗಳ ನಂತರ, ಬಡ್ಡಿ ಸಹಿತವಾಗಿ ಅಥವಾ ಬಡ್ಡಿ ರಹಿತವಾಗಿ, ಮರುಪಾವತಿ ಮಾಡಲಾಗುವಂಥ ನಗದು ಠೇವಣಿಗಳನ್ನು ಸಂದಾಯ ಮಾಡಿದ ಮೇಲೆ, ಆದರೆ ಕ್ಯಾಪಿಟೇಷನ್ ಶುಲ್ಕದ ಸಂದಾಯವಿಲ್ಲದೆ ಭರ್ತಿ ಮಾಡಬಹುದು; ಅಥವಾ

(ii) ಅದರ ವಿವೇಚನೆಗೆ ಅನುಸಾರವಾಗಿ

– ಭರ್ತಿ ಮಾಡಬಹುದು:

ಆದರೆ, ಸರ್ಕಾರವು ನಿರ್ದಿಷ್ಟಪಡಿಸಬಹುದಾದಷ್ಟು ಸಂಖ್ಯೆಯ ಸೀಟುಗಳನ್ನು ಆದರೆ (ಎ) ಮತ್ತು (ಬಿ) ಖಂಡಗಳಲ್ಲಿ ಉಲ್ಲೇಖಿಸಿರುವ ಸೀಟುಗಳ ಒಟ್ಟು ಸಂಖ್ಯೆಯು ಶೇ.50 ಕ್ಕಿಂತ ಕಡಿಮೆ ಇರದಂತೆ ಕರ್ನಾಟಕ ವಿದ್ಯಾರ್ಥಿಗಳ ವರ್ಗದಿಂದ ಭರ್ತಿ ಮಾಡತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ ಕರ್ನಾಟಕದ ವಿದ್ಯಾರ್ಥಿಗಳು ಎಂದರೆ, ಸರ್ಕಾರವು ನಡೆಸುತ್ತಿರುವ ಅಥವಾ ಮನ್ನಣೆ ಪಡೆದ ಕರ್ನಾಟಕ ರಾಜ್ಯದಲ್ಲಿನ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರವು ನಿರ್ದಿಷ್ಟಪಡಿಸಬಹುದಾದಷ್ಟು ಸಂಖ್ಯೆಯ ವರ್ಷಗಳವರೆಗೆ ಅಧ್ಯಯನ ಮಾಡಿದ ವ್ಯಕ್ತಿಗಳು ;

(3) 2ನೇ ಖಂಡದ (ಬಿ) ಉಪ ಖಂಡದ (i)ನೇ ಬಾಬಿನ ಅನುಸಾರವಾಗಿ ಭರ್ತಿ ಮಾಡಬೇಕಾಗಿರುವ ಶಿಕ್ಷಣ ಸಂಸ್ಥೆಯ ಅಂಥ ಸೀಟುಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಒಂದು ಸಮಿತಿಯನ್ನು ರಚಿಸತಕ್ಕದ್ದು. ಸರ್ಕಾರದ ಮತ್ತು ಅಂಥ ಶಿಕ್ಷಣ ಸಂಸ್ಥೆಯು ಸಂಯೋಜನೆಗೊಂಡಿರುವ ವಿಶ್ವ ವಿದ್ಯಾನಿಲಯದ ತಲಾ ಒಬ್ಬೊಬ್ಬ ನಾಮ ನಿರ್ದೇಶಿತನನ್ನು ಅಂಥ ಸಮಿತಿಯಲ್ಲಿ ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.

**5. ಶುಲ್ಕಗಳ ನಿಯಂತ್ರಣ, ಇತ್ಯಾದಿ.–** (1) ಸರ್ಕಾರವು ಅಧಿಸೂಚನೆಯ ಮೂಲಕ ,ಯಾವುದೇ ಅಥವಾ ಎಲ್ಲ ವರ್ಗದ ಅಥವಾ ವರ್ಗಗಳ ವಿದ್ಯಾರ್ಥಿಗಳ ಸಂಬಂಧದಲ್ಲಿ ಯಾವುದೇ ಶಿಕ್ಷಣ ಸಂಸ್ಥೆಯು ಅಥವಾ ಅಂಥ ಸಂಸ್ಥೆಗಳ ವರ್ಗವು ಸ್ವೀಕರಿಸಬಹುದಾದ ಅಥವಾ ಸಂಗ್ರಹ ಮಾಡಬಹುದಾದ ಬೋಧನಾ ಶುಲ್ಕ ಅಥವಾ ಯಾವುದೇ ಇತರ ಶುಲ್ಕ ಅಥವಾ ಠೇವಣಿ ಅಥವಾ ಇತರ ಮೊಬಲಗನ್ನು ನಿಯಂತ್ರಿಸಲು ಸಕ್ಷಮವಾಗಿರತಕ್ಕದ್ದು.

(2) ಯಾವುದೇ ಶಿಕ್ಷಣ ಸಂಸ್ಥೆಯು (1)ನೇ ಉಪ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಲಾದ ಮೊಬಲಗಿಗಿಂತ ಅಧಿಕವಾಗಿ ಯಾವುದೇ ಶುಲ್ಕ ಅಥವಾ ಮೊಬಲಗನ್ನು ಸಂಗ್ರಹಿಸತಕ್ಕದ್ದಲ್ಲ ಅಥವಾ ಠೇವಣಿಗಳನ್ನು ಅಂಗೀಕರಿಸತಕ್ಕದ್ದಲ್ಲ ಅಥವಾ 3ನೇ ಪ್ರಕರಣದ ಪರಂತುಕದ ಮೇರೆಗೆ ಅನುಮತಿಸತಕ್ಕದ್ದಲ್ಲ.

(3) ಪ್ರತಿಯೊಂದು ಶಿಕ್ಷಣ ಸಂಸ್ಥೆಯು ತಾನು ಸಂಗ್ರಹಿಸಿದ ಶುಲ್ಕ ಅಥವಾ ಕ್ಯಾಪಿಟೇಷನ್ ಶುಲ್ಕ ಅಥವಾ ಠೇವಣಿಗಳು ಅಥವಾ ಇತರ ಮೊಬಲಗಿಗೆ ಅಧಿಕೃತ ರಸೀದಿಯನ್ನು ನೀಡತಕ್ಕದ್ದು.

(4) ಯಾವುದೇ ಶಿಕ್ಷಣ ಸಂಸ್ಥೆಯು, ಶುಲ್ಕ ಅಥವಾ ಕ್ಯಾಪಿಟೇಷನ್ ಶುಲ್ಕ ಅಥವಾ ಠೇವಣಿಗಳು ಅಥವಾ ಇತರ ಮೊಬಲಗಿನ ರೂಪದಲ್ಲಿ ಸ್ವೀಕರಿಸಿದ ಎಲ್ಲ ಹಣವನ್ನು ಸಂಸ್ಥೆಯ ಖಾತೆಯಲ್ಲಿ ಯಾವುದೇ ಅನುಸೂಚಿತ ಬ್ಯಾಂಕುಗಳಲ್ಲಿ ಠೇವಣಿ ಇಡತಕ್ಕದ್ದು ಮತ್ತು ಅದನ್ನು ಸಂಸ್ಥೆಯ ಸುಧಾರಣೆಗೆ ಮತ್ತು ಶೈಕ್ಷಣಿಕ ಸೌಲಭ್ಯಗಳ ಅಭಿವೃದ್ಧಿಗೆ ಮತ್ತು ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸಂಬಂಧಿತ ಉದ್ದೇಶಗಳಿಗೆ ಮತ್ತು ಅಷ್ಟರ ಮಟ್ಟಿಗೆ ಮತ್ತು ಅಂಥ ರೀತಿಯಲ್ಲಿ ವಿನಿಯೋಗಿಸತಕ್ಕದ್ದು ಮತ್ತು ಖರ್ಚು ಮಾಡತಕ್ಕದ್ದು.

(5) (4)ನೇ ಉಪ ಪ್ರಕರಣದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ, ಸರ್ಕಾರವು ಯಾವುವೇ ಶಿಕ್ಷಣ ಸಂಸ್ಥೆಗಳನ್ನು, ಆ ಸಂಸ್ಥೆಯು ಸುಧಾರಣೆ ಮತ್ತು ಅಭಿವೃದ್ಧಿಯ ಸಲುವಾಗಿ ತಾವು ರೂಪಿಸಿರುವ ಕಾರ್ಯಕ್ರಮಗಳನ್ನು ಅಥವಾ ಯೋಜನೆಗಳನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವಂತೆ ಅಗತ್ಯಪಡಿಸಬಹುದು.

**6. ವೆಚ್ಚದ ನಿಯಂತ್ರಣ ಮತ್ತು ಲೆಕ್ಕಪತ್ರಗಳ ನಿರ್ವಹಣೆ, ಇತ್ಯಾದಿ.–** (1) ಸರ್ಕಾರವು ನಿಯಮಿಸಬಹುದಾದಂಥ ರೀತಿಯಲ್ಲಿ ಶಿಕ್ಷಣ ಸಂಸ್ಥೆಗಳ ವೆಚ್ಚವನ್ನು ಮತ್ತು ಅವುಗಳ ಲೆಕ್ಕಪತ್ರಗಳ ನಿರ್ವಹಣೆಯನ್ನು ನಿಯಂತ್ರಿಸಬಹುದು.

(2) ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಅದು ಅವಶ್ಯವೆಂದು ಭಾವಿಸಬಹುದಾದಂಥ ವರದಿಗಳನ್ನು ಅಥವಾ ವಿವರಪತ್ರಗಳನ್ನು ಸಲ್ಲಿಸುವಂತೆ ಅಗತ್ಯಪಡಿಸಬಹುದು.

**7. ದಂಡನೆಗಳು.–** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಅಥವಾ ಆದೇಶಗಳನ್ನು ಉಲ್ಲಂಘಿಸುವ ಯಾರೇ ಆಗಲಿ, ಅಪರಾಧ ನಿರ್ಣಯವಾದ ತರುವಾಯ

ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದ ಆದರೆ ಏಳು ವರ್ಷಗಳನ್ನು ಮೀರದ ಅವಧಿಯ ಸೆರೆಮನೆವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು. 3ನೇ ಪ್ರಕರಣದ ಅಥವಾ 5ನೇ ಪ್ರಕರಣದ ಮೇರೆಗೆ ಅಪರಾಧ ನಿರ್ಣಯ ಮಾಡಿರುವಲ್ಲಿ, ಅದರ ಅಡಿಯಲ್ಲಿ ಅಪರಾಧ ನಿರ್ಣೀತವಾದ ಸಂಸ್ಥೆ ಅಥವಾ ವ್ಯಕ್ತಿಯು, ಯಾರಿಂದ ಅಧಿಕ ಮೊಬಲಗನ್ನು ಸಂಗ್ರಹಿಸಲಾಗಿದೆಯೋ ಆ ಪಕ್ಷಕಾರನಿಗೆ ಆ ಹಣವನ್ನು ಮರು ಪಾವತಿ ಮಾಡತಕ್ಕದ್ದು.

8. **ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಯಾವುವೇ ಉಪಬಂಧಗಳ ಅಥವಾ ಅದರ ಅಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ವಿರುದ್ಧ ಒಂದು ಅಪರಾಧವನ್ನು ಒಂದು ಕಂಪನಿ ಮಾಡಿರುವಲ್ಲಿ, ಅಪರಾಧವು ನಡೆದ ಕಾಲದಲ್ಲಿ ಆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಕಂಪನಿಯ ವ್ಯವಹಾರಗಳನ್ನು ನಡೆಸಲು ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ಕಾನೂನು ಕ್ರಮಕ್ಕೆ ಗುರಿಯಾಗತಕ್ಕದ್ದು ಮತ್ತು ಅದಕ್ಕನುಸಾರವಾಗಿ ದಂಡಿತರಾಗತಕ್ಕದ್ದು:

ಆದರೆ, ಈ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಆ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ರೀತಿಯ ಅಗತ್ಯ ಎಚ್ಚರಿಕೆಯನ್ನು ವಹಿಸಿದ್ದೆನೆಂದು ರುಜುವಾತುಪಡಿಸಿದರೆ, ಅಂಥ ಯಾರೇ ವ್ಯಕ್ತಿಯನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1) ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಅಂಥ ಯಾವುದೇ ಅಪರಾಧವನ್ನು ಒಂದು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವನ್ನು ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆಯೆಂದು ಅಥವಾ ಅವನ ಯಾವುದೇ ನಿರ್ಲಕ್ಷ್ಯದಿಂದ ನಡೆದಿದೆಯೆಂದು ರುಜುವಾತಾದಲ್ಲಿ, ಅಂಥ ನಿರ್ದೇಶಕನನ್ನು, ವ್ಯವಸ್ಥಾಪಕನನ್ನು, ಕಾರ್ಯದರ್ಶಿಯನ್ನು ಅಥವಾ ಇತರ ಅಧಿಕಾರಿಯನ್ನು ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವನ ವಿರುದ್ಧದ ಕಾನೂನು ಕ್ರಮಕ್ಕೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) 'ಕಂಪನಿ'ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ಇದು ಟ್ರಸ್ಟ್‌ನ್ನು, ಫರ್ಮ್‌ನ್ನು, ಸೊಸೈಟಿಯನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ ; ಮತ್ತು

(ಬಿ) (i) ಫರ್ಮಿಗೆ ಸಂಬಂಧಿಸಿದಂತೆ 'ನಿರ್ದೇಶಕ' ಎಂದರೆ ಆ ಫರ್ಮಿನ ಒಬ್ಬ ಪಾಲುದಾರ ;

(ii) ಒಂದು ಸೊಸೈಟಿ, ಒಂದು ಟ್ರಸ್ಟ್ ಅಥವಾ ವ್ಯಕ್ತಿಗಳ ಇತರ ಸಂಘ ಎಂದರೆ, ಸೊಸೈಟಿ, ಟ್ರಸ್ಟ್ ಅಥವಾ ಇತರ ಸಂಸ್ಥೆಗಳ ನಿಯಮಗಳ ಅಡಿಯಲ್ಲಿ ಸಂದರ್ಭಾನುಸಾರ ಸೊಸೈಟಿ, ಟ್ರಸ್ಟ್ ಅಥವಾ ಇತರ ಸಂಸ್ಥೆಯ ವ್ಯವಹಾರಗಳ ಆಡಳಿತವನ್ನು ವಹಿಸಿಕೊಡಲಾದ ವ್ಯಕ್ತಿ.

9. **ಪ್ರವೇಶಿಸುವ ಮತ್ತು ಪರಿಶೀಲಿಸುವ ಅಧಿಕಾರ:–** ಈ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಧಿಕೃತರಾದ ಗೆಜೆಟೆಡ್ ಅಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾರೇ ಅಧಿಕಾರಿಯು, ಈ ಅಧಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಯಾಗುತ್ತಿದೆ ಅಥವಾ ಆಗಿದೆಯೆಂದು ನಂಬಲು ಕಾರಣವಿದ್ದರೆ, ಅವನು ಯಾವುದೇ ಶಿಕ್ಷಣ ಸಂಸ್ಥೆಯ ಕೆಲಸದ ಸಾಮಾನ್ಯ ವೇಳೆಯಲ್ಲಿ, ಯಾವುದೇ ಸಮಯದಲ್ಲಿ ಅಂಥ ಸಂಸ್ಥೆಯನ್ನು ಅಥವಾ ಅದರ ಯಾವುದೇ ಆವರಣವನ್ನು ಅಥವಾ ಅಂಥ ಸಂಸ್ಥೆಯ ಆಡಳಿತ ಮಂಡಳಿಗೆ ಸೇರಿದ ಯಾವುದೇ ಆವರಣವನ್ನು ಪ್ರವೇಶಿಸಬಹುದು ಮತ್ತು ಅಂಥ ಸಂಸ್ಥೆಗೆ ಅಥವಾ ಆಡಳಿತ ಮಂಡಳಿಗೆ ಸೇರಿದ ಯಾವುದೇ ದಾಖಲೆ, ಲೆಕ್ಕಪತ್ರಗಳು, ರಿಜಿಸ್ಟರ್ ಅಥವಾ ಇತರ ದಸ್ತಾವೇಜುಗಳನ್ನು ಯಾವುದೇ ಅಂಥ ದಾಖಲೆ, ಲೆಕ್ಕಪತ್ರಗಳು, ರಿಜಿಸ್ಟರು ಅಥವಾ ಇತರ ದಸ್ತಾವೇಜುಗಳು ಅಂಥ ಸಂಸ್ಥೆಗೆ ಸಂಬಂಧಪಡುವಷ್ಟರ ಮಟ್ಟಿಗೆ ಅವುಗಳನ್ನು ಶೋಧಿಸಬಹುದು ಮತ್ತು ಪರಿಶೀಲಿಸಬಹುದು ಮತ್ತು ಯಾವುದೇ ಅಂಥ ಉಲ್ಲಂಘನೆಯಾಗುತ್ತಿದೆಯೇ ಅಥವಾ ಆಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ ಅಂಥ ಯಾವುದೇ ದಾಖಲೆಯನ್ನು, ಲೆಕ್ಕಪತ್ರಗಳನ್ನು, ರಿಜಿಸ್ಟರನ್ನು, ಅಥವಾ ಇತರ ದಸ್ತಾವೇಜುಗಳನ್ನು ವಶಪಡಿಸಿಕೊಳ್ಳಬಹುದು.

(2) ಈ ಅಧಿನಿಯಮದ ಪ್ರಾರಂಭದಲ್ಲಿ ಅಸ್ತಿತ್ವದಲ್ಲಿರುವ, ಯಾವುದೇ ಶಿಕ್ಷಣ ಸಂಸ್ಥೆಯ ಹಣಕಾಸುಗಳನ್ನು ಅಥವಾ ಸಂಪನ್ಮೂಲಗಳನ್ನು ಅಥವಾ ಇತರ ಆಸ್ತಿಗಳನ್ನು ಸೂಕ್ತವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸಿಕೊಳ್ಳುವ ಬಗ್ಗೆ ಖಚಿತಪಡಿಸಿಕೊಳ್ಳುವುದಕ್ಕಾಗಿ, ಸರ್ಕಾರವು (1)ನೇ ಉಪ ಪ್ರಕರಣದ

ಉಪಬಂಧಗಳ ನೆರವು ಪಡೆಯಲು ಮತ್ತು ಸಂಸ್ಥೆಯ ಅಂಥ ಹಣಕಾಸುಗಳ, ಸಂಪನ್ಮೂಲಗಳ ಮತ್ತು ಆಸ್ತಿಗಳ ಬಗ್ಗೆ ಖಚಿತಪಡಿಸಿಕೊಳ್ಳಲು ಮತ್ತು ಹಾಗೆ ಖಚಿತಪಡಿಸಿಕೊಂಡ ತರುವಾಯ ಆಡಳಿತ ಮಂಡಲಿಗೆ ತಾನು ಸೂಕ್ತವೆಂದು ಭಾವಿಸುವಂಥ ನಿರ್ದೇಶನಗಳನ್ನು ನೀಡಲು ಸಕ್ಷಮವಾಗಿರತಕ್ಕದ್ದು.

(3) ಶೋಧನೆಗಳು ಮತ್ತು ಜಪ್ತಿಗಳಿಗೆ ಸಂಬಂಧಿಸಿದಂತೆ ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) ಉಪಬಂಧಗಳು (1)ನೇ ಉಪ ಪ್ರಕರಣದ ಅಡಿಯಲ್ಲಿನ ಶೋಧನೆಗಳಿಗೆ ಮತ್ತು ಜಪ್ತಿಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

10. **ಅಲ್ಪ ಸಂಖ್ಯಾತ ಸಂಸ್ಥೆಗಳಿಗೆ ಅಧಿನಿಯಮದ ಅನ್ವಯ.–** ಈ ಅಧಿನಿಯಮದಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಅಥವಾ ಆದೇಶಗಳಲ್ಲಿ ಇರುವ ಯಾವುದೂ, ಭಾರತ ಸಂವಿಧಾನದ 30ನೇ ಅನುಚ್ಛೇದದ ಅಡಿಯಲ್ಲಿ ಖಾತರಿಗೊಳಿಸಲಾದ ಹಕ್ಕುಗಳೊಂದಿಗೆ ಅವು ಅಸಂಗತವಾಗಿರುವಷ್ಟರ ಮಟ್ಟಿಗೆ ಯಾವುದೇ ಅಲ್ಪ ಸಂಖ್ಯಾತ ಶಿಕ್ಷಣಸಂಸ್ಥೆಗೆ ಅನ್ವಯವಾಗತಕ್ಕದ್ದಲ್ಲ.

11. **ಅಪರಾಧಗಳ ಸಂಜ್ಞೇಯತೆ.–** ಯಾವುದೇ ನ್ಯಾಯಾಲಯವು ಸರ್ಕಾರದ ಅಥವಾ ಈ ಸಂಬಂಧದಲ್ಲಿ ಸರ್ಕಾರವು ಅಧಿಕೃತಗೊಳಿಸಬಹುದಾದಂಥ ಅಧಿಕಾರಿಯ ಮಂಜೂರಾತಿ ಪಡೆದ ಹೊರತು, ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧವನ್ನು ಸಂಜ್ಞೇಯತೆಗೆ ತೆಗೆದುಕೊಳ್ಳತಕ್ಕದ್ದಲ್ಲ.

12. **ಇತರ ಕಾನೂನುಗಳನ್ನು ಅಧಿಕ್ರಮಿಸುವ ಅಧಿನಿಯಮ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಸಂಗತವಾದುದು ಏನೇ ಇದ್ದರೂ, ಈ ಅಧಿನಿಯಮದ ಉಪಬಂಧಗಳು ಜಾರಿಯಲ್ಲಿರತಕ್ಕದ್ದು.

13. **ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಅಥವಾ ಆದೇಶಗಳ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸಲು ಅಥವಾ ಪ್ರಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ಪಡೆದ ಸರ್ಕಾರದ ಅಥವಾ ಯಾರೇ ಅಧಿಕಾರಿಯ, ಪ್ರಾಧಿಕಾರದ ಅಥವಾ ವ್ಯಕ್ತಿಯ ವಿರುದ್ಧ ಯಾವುದೇ ದಾವೆಯನ್ನು, ಅಭಿಯೋಜನೆಯನ್ನು ಅಥವಾ ಇತರ ಕಾನೂನು ಕ್ರಮವನ್ನು ಹೂಡತಕ್ಕದ್ದಲ್ಲ.

14. **ನಿಯಮ ರಚನಾಧಿಕಾರ.–** (1) ಸರ್ಕಾರವು, ಅಧಿಸೂಚನೆಯ ಮೂಲಕ ಈ ಅಧಿನಿಯಮದ ಎಲ್ಲ ಅಥವಾ ಯಾವುವೇ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ನಂತರ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿದ್ದರೆ ಅದರ ಪ್ರತಿಯೊಂದು ಸದನದ ಮುಂದೆ, ಮತ್ತು ಅದು ಅಧಿವೇಶನದಲ್ಲಿಲ್ಲದಿದ್ದರೆ, ನಿಕಟ ತರುವಾಯದ ಒಟ್ಟು ಮೂವತ್ತು ದಿನಗಳ ಅವಧಿಯ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ಅಧಿವೇಶನವು ಅಥವಾ ಅದರ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ಎರಡೂ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಆ ನಿಯಮವನ್ನು ರದ್ದುಗೊಳಿಸಬೇಕೆಂದು ಒಪ್ಪಿದರೆ, ಆ ನಿಯಮವು, ಆ ಮಾರ್ಪಾಟನ್ನು ಅಥವಾ ರದ್ದತಿಯನ್ನು ಅಧಿಸೂಚಿಸಿದಂಥ ದಿನಾಂಕದಿಂದ ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಜಾರಿಗೊಳ್ಳತಕ್ಕದ್ದು ಅಥವಾ ರದ್ದಾಗತಕ್ಕದ್ದು; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

15. **ಸಿಂಧುಗೊಳಿಸುವಿಕೆ.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಇದು ಅಧಿನಿಯಮಿತ ಗೊಳ್ಳುವುದನ್ನು ಮುಂದುವರಿಸುವ ಯಾವುದೇ ವಿಷಯದ ಸಂಬಂಧದಲ್ಲಿ (ಸರ್ಕಾರಿ ಆದೇಶ ಸಂ. ಎಚ್ ಎಫ್ ಡಬ್ಲ್ಯೂ 44 ಎಂ ಎಸ್ ಎಫ್ 83, ದಿನಾಂಕ 20ನೇ ಜೂನ್ 1983, ಸರ್ಕಾರಿ ಆದೇಶ ಸಂ. ಇಡಿ 37 ಟಿಇಸಿ 83, ದಿನಾಂಕ 7ನೇ ಜುಲೈ 1983 ಮತ್ತು ಸರ್ಕಾರಿ ಆದೇಶ ಸಂ. ಇಡಿ 37 ಟಿಇಸಿ 83, ದಿನಾಂಕ 1ನೇ ಅಕ್ಟೋಬರ್ 1983, ಸರ್ಕಾರಿ ಆದೇಶ ಸಂ. ಇಡಿ 23 ಟಿಇಸಿ 84, ದಿನಾಂಕ 21ನೇ ಜೂನ್ 1984, ಸರ್ಕಾರಿ ಆದೇಶ ಸಂ. ಎಚ್ ಎಫ್ ಡಬ್ಲ್ಯೂ 137 ಪಿಟಿಡಿ 84, ದಿನಾಂಕ 25ನೇ ಜುಲೈ 1984, ಸರ್ಕಾರಿ ಆದೇಶ ಸಂ. ಇಡಿ 175 ಟಿಪಿಇ 84, ದಿನಾಂಕ 31ನೇ ಜುಲೈ 1984 ಮತ್ತು ಸರ್ಕಾರಿ ಆದೇಶ ಸಂ. ಎಚ್‌ಎಫ್‌ಡಬ್ಲ್ಯೂ 136 ಎಂಎಸ್‌ಎಫ್ 84 ದಿನಾಂಕ 1ನೇ ಆಗಸ್ಟ್ 1983 ಇವುಗಳೂ ಸೇರಿ),–

(ಎ) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧ್ಯಾದೇಶ, 1983 (1983ರ ಕರ್ನಾಟಕ ಅಧ್ಯಾದೇಶ ಸಂ. 10) ರ ಅಡಿಯಲ್ಲಿ ಅಥವಾ ಅದರ ಪ್ರಾರಂಭದ ದಿನಾಂಕಕ್ಕೆ ಮುಂಚೆ; ಮತ್ತು

[(ಬಿ) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) (ಸಂ.2) ಅಧ್ಯಾದೇಶ, 1983ರ (1983ರ ಕರ್ನಾಟಕ ಅಧ್ಯಾದೇಶ ಸಂ. 14) ಅಡಿಯಲ್ಲಿ ಅಥವಾ ಸದರಿ ಅಧ್ಯಾದೇಶವನ್ನು ಘೋಷಿಸಿದ ದಿನಾಂಕಕ್ಕೆ ಮುಂಚೆ, ಆದರೆ, 1983ರ ಕರ್ನಾಟಕ ಅಧ್ಯಾದೇಶ ಸಂ.10 ರದ್ದಾದ ತರುವಾಯ; ಮತ್ತು

(ಸಿ) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧ್ಯಾದೇಶ, 1984ರ (1984ರ ಕರ್ನಾಟಕ ಅಧ್ಯಾದೇಶ ಸಂ. 8) ಅಡಿಯಲ್ಲಿ ಅಥವಾ ಸದರಿ ಅಧ್ಯಾದೇಶವನ್ನು ಘೋಷಿಸಿದ ದಿನಾಂಕಕ್ಕೆ ಮುಂಚೆ ಆದರೆ 1983ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 14 ರದ್ದಾದ ತರುವಾಯ

– ಮಾಡಿದ ಅಥವಾ ಹೊರಡಿಸಿದ ಯಾವುದೇ ನಿಯಮ ಅಥವಾ ಆದೇಶ ಅಥವಾ ಅಧಿಸೂಚನೆಯನ್ನು ಮತ್ತು ಅಂಥ ನಿಯಮ ಅಥವಾ ಆದೇಶ ಅಥವಾ ಅಧಿಸೂಚನೆಯ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೇರೆಗೆ ಮಾಡಲಾದುದು ಅಥವಾ ಹೊರಡಿಸಲಾದುದು ಆಥವಾ ಸಂದರ್ಭಾನುಸಾರ ಅದರ ಅಡಿಯಲ್ಲಿ ಮಾಡಲಾದ ಅಥವಾ ಹೊರಡಿಸಲಾದ ಯಾವುದೇ ಅಂಥ ನಿಯಮ ಅಥವಾ ಆದೇಶ ಅಥವಾ ಅಧಿಸೂಚನೆಯ ಮೇರೆಗೆ ಮಾಡಿದ್ದಾಗಿದ್ದರೆ ಅಥವಾ ಕೈಗೊಂಡಿದ್ದಾಗಿದ್ದರೆ ಹೇಗೋ ಹಾಗೆ ಸಿಂಧುವಾಗಿದೆ ಎಂದು ಮತ್ತು ಜಾರಿಯಾಗಿದೆ ಎಂದು ಭಾವಿಸತಕ್ಕದ್ದು.][1]

1. 1985ರ ಅಧಿನಿಯಮ 17 ರ ಮೂಲಕ 9.8.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

16. [1][ನಿರಸನ ಮತ್ತು ಉಳಿಸುವಿಕೆಗಳು, ಇತ್ಯಾದಿ][1].– (1) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) (ಸಂ.2) ಅಧ್ಯಾದೇಶ, 1983ರ (1983ರ ಕರ್ನಾಟಕ ಅಧ್ಯಾದೇಶ ಸಂ. 14) – ಇದನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

[1][(2) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಷನ್ ಶುಲ್ಕ ನಿಷೇಧ) ಅಧ್ಯಾದೇಶ , 1984 (1984ರ ಕರ್ನಾಟಕ ಅಧ್ಯಾದೇಶ ಸಂ. 8) – ಇದನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

(3) 1983ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 14 ಮತ್ತು 1984ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 8 ಇವುಗಳನ್ನು ನಿರಸನಗೊಳಿಸಿದ್ದರೂ, ಸದರಿ ಅಧ್ಯಾದೇಶಗಳ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯವನ್ನು, ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು.

(4) 7ನೇ ಮತ್ತು 8ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಆದರೆ (3)ನೇ ಉಪ ಪ್ರಕರಣಕ್ಕೆ ಒಳಪಟ್ಟು, 1983ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 14 ರದ್ದಾದ ನಂತರ, ಆದರೆ ಸರ್ಕಾರಿ ರಾಜ್ಯಪತ್ರದಲ್ಲಿ ಈ ಅಧಿನಿಯಮವನ್ನು ಪ್ರಕಟಿಸಿದ ದಿನಾಂಕಕ್ಕಿಂತ ಮುಂಚೆ ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸಿ ಮಾಡಿದ ಯಾವುದೇ ಕಾರ್ಯಕ್ಕಾಗಿ ಯಾರೇ ವ್ಯಕ್ತಿ ಅಥವಾ ಒಂದು ಕಂಪನಿಯನ್ನು ಅಪರಾಧಿಯೆಂದು ನಿರ್ಣಯಿಸತಕ್ಕದ್ದಲ್ಲ.][1]

1. 1985ರ ಅಧಿನಿಯಮ 17 ರ ಮೂಲಕ 9.8.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

The above translation of the Karnataka Educational Institutions (Prohibition of Capitation Fee) Act, 1984 (Karnataka Act 37 of 1984) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 972

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 37 ರಾಶಾಪ್ರ 2006, ಬೆಂಗಳೂರು, ದಿನಾಂಕ: 4ನೇ ಮೇ 2006

ಕರ್ನಾಟಕ ಋಣ ಪರಿಹಾರ ಅಧಿನಿಯಮ, 1976ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಋಣಪರಿಹಾರ ಅಧಿನಿಯಮ, 1976
## ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**



## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1976ರ ಅಧಿನಿಯಮ 25.–** ಸರ್ಕಾರ ಮತ್ತು ಸಾಂಸ್ಥಿಕ ಏಜೆನ್ಸಿಗಳನ್ನು ಹೊರತುಪಡಿಸಿ ಇತರ ಮೂಲಗಳಿಂದ ತೆಗೆದುಕೊಳ್ಳುವ ನಗರ ಮತ್ತು ಗ್ರಾಮೀಣ ಪ್ರದೇಶದ ಋಣದ ಸಮಸ್ಯೆಗಳು ಇತ್ತೀಚಿನ ದಿನಗಳಲ್ಲಿ ಗಂಭೀರ ಮಟ್ಟವನ್ನು ತಲುಪಿವೆ ಎಂದು ಪರಿಭಾವಿಸಲಾಗಿದೆ. ಇದಕ್ಕೆ ಹಣದ ಮಾರುಕಟ್ಟೆಯ ಬಿಕ್ಕಟ್ಟೂ ಒಂದು ಕಾರಣವಾಗಿದೆ. ದುಬಾರಿ ಬಡ್ಡಿ ದರಗಳನ್ನು ವಿಧಿಸಲಾಗುತ್ತಿದೆ ಮತ್ತು ದುರ್ವ್ಯವಹಾರಗಳನ್ನು ನಡೆಸಲಾಗುತ್ತಿದೆ. ಸಣ್ಣ ಹಿಡುವಳಿಯ ರೈತರು, ಭೂರಹಿತ ಕೃಷಿ ಕಾರ್ಮಿಕರು ಮತ್ತು ಸಮುದಾಯದ ದುರ್ಬಲ ವರ್ಗದರೆಲ್ಲರೂ ಶೋಷಣೆಗೆ ಒಳಗಾಗುತ್ತಿದ್ದಾರೆ. ಆದ್ದರಿಂದ ಸದರಿ ವರ್ಗಗಳಿಗೆ ಸೂಕ್ತವಾದ ಪರಿಹಾರ ಒದಗಿಸುವುದು ಅಗತ್ಯವೆಂದು ರಾಜ್ಯ ಸರ್ಕಾರವು ಪರಿಗಣಿಸಿದೆ. ಪ್ರಧಾನ ಮಂತ್ರಿಗಳು ಘೋಷಿಸಿರುವ 20 ಅಂಶಗಳ ಕಾರ್ಯಕ್ರಮಗಳಿಗೆ ಇದು ಸುಸಂಗತವಾಗಿದೆ.

ಆದ್ದರಿಂದ, ಮೇಲೆ ಉಲ್ಲೇಖಿಸಿದ ವರ್ಗಗಳು ಹೊಂದಿರುವ ಋಣಗಳು ಸಂದಾಯವಾಗಿವೆ ಎಂದು ಘೋಷಿಸಲು ಕರ್ನಾಟಕ ಋಣ ಪರಿಹಾರ ಅಧ್ಯಾದೇಶ, 1975ನ್ನು ಹೊರಡಿಸಲಾಗಿದೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

(ದಿನಾಂಕ 22.1.1976ರ ಕರ್ನಾಟಕ ರಾಜ್ಯಪತ್ರದ ಭಾಗ – IV-2ಎ ನಲ್ಲಿ ಪುಟ 54ರಲ್ಲಿ ಪ್ರಕಟಿಸಲಾಗಿದೆ.)

**II**

**1976ರ ತಿದ್ದುಪಡಿ ಮಾಡುವ ಅಧಿನಿಯಮ 63.–** ಋಣ ಪರಿಹಾರ ಅಧಿನಿಯಮದ ಜಾರಿಯಿಂದಾಗಿ, ಉಪ ವಿಭಾಗೀಯ ದಂಡಾಧಿಕಾರಿಗಳ ಕೆಲಸ ಕಾರ್ಯಗಳು ಬಹಳಷ್ಟು ಪ್ರಮಾಣದಲ್ಲಿ ಹೆಚ್ಚಾಗಿದ್ದು, ಎಲ್ಲ ಔಪಚಾರಿಕ ಕ್ರಮಗಳ ಪಾಲನೆಯ ತರುವಾಯ ಅರ್ಜಿಗಳನ್ನು ವಿಲೆ ಮಾಡುವ ಕೆಲಸವು ಅವರಿಗೆ ಅತ್ಯಂತ ಕಷ್ಟಕರವೆನಿಸುತ್ತಿದೆ. ಆದ್ದರಿಂದ, ಪರಿಹಾರ ನೀಡುವುದಷ್ಟೇ ಅಲ್ಲದೆ ಪ್ರಕರಣಗಳ ತ್ವರಿತ ವಿಲೇವಾರಿಯನ್ನೂ ತನ್ಮೂಲಕ ದುರ್ಬಲ ವರ್ಗಗಳಿಗೆ ಈ ಅಧಿನಿಯಮದ ಸೌಲಭ್ಯಗಳು ದೊರಕುವುದನ್ನು ಖಚಿತಪಡಿಸಿಕೊಳ್ಳುವುದು ಅವಶ್ಯವೆಂದು ಅನಿಸಿದ್ದರಿಂದ ಅಧಿನಿಯಮದ ಅನುಷ್ಠಾನದಲ್ಲಿ ಕಾರ್ಯನಿರ್ವಾಹಕ ದಂಡಾಧಿಕಾರಿಗಳ ಸೇವೆಯನ್ನು ಬಳಸಿಕೊಳ್ಳುವುದು ಅವಶ್ಯವೆಂದು ಕಂಡುಬಂದಿತು. ಆದ್ದರಿಂದ, ರಾಜ್ಯ ಸರ್ಕಾರದಿಂದ ಅಧಿಕೃತಗೊಳಿಸಬಹುದಾದಂತೆ ಕಾರ್ಯನಿರ್ವಾಹಕ ದಂಡಾಧಿಕಾರಿಯು ಅಧಿನಿಯಮವನ್ನು ಜಾರಿಗೆ ತರಲು ಮತ್ತು ಅಧಿನಿಯಮದ ಉಪಬಂಧಗಳ ಅಡಿ ದುರ್ಬಲ ವರ್ಗಗಳಿಗೆ ದೊರೆಯಬಹುದಾದ ಪರಿಹಾರಗಳನ್ನು ಅವರಿಗೆ ಒದಗಿಸಲು ಅಧಿಕಾರ ನೀಡಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 8.11.1978ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ –IV–2ಎನಲ್ಲಿ, ಸಂಖ್ಯೆ 4428 ಎಂದು ಪುಟ 3ರಲ್ಲಿ ಪ್ರಕಟಿಸಲಾಗಿದೆ.)

# 1976ರ ಕರ್ನಾಟಕ ಅಧಿನಿಯಮ ಸಂಖ್ಯೆ 25

(1976ರ ಮಾರ್ಚ್ ಹದಿಮೂರನೇ ದಿನದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಋಣ ಪರಿಹಾರ ಅಧಿನಿಯಮ, 1976

(1976ರ ಮಾರ್ಚ್ ಹನ್ನೆರಡನೇ ದಿನದಂದು ರಾಷ್ಟ್ರಪತಿಯವರ ಸಮ್ಮತಿ ಪಡೆದಿದೆ)

(1976ರ ಅಧಿನಿಯಮ 63ರ ಮೂಲಕ ತಿದ್ದುಪಡಿಯಾದಂತೆ)

**ಕರ್ನಾಟಕ ರಾಜ್ಯದಲ್ಲಿರುವ ಸಣ್ಣ ರೈತರು, ಭೂ ರಹಿತ ಕೃಷಿ ಕಾರ್ಮಿಕರು ಮತ್ತು ದುರ್ಬಲ ವರ್ಗಗಳ ಜನರಿಗೆ ಋಣ ಪರಿಹಾರ ಒದಗಿಸುವ ಒಂದು ಅಧಿನಿಯಮ ;**

ಕರ್ನಾಟಕ ರಾಜ್ಯದಲ್ಲಿನ ಸಣ್ಣ ರೈತರು, ಭೂ ರಹಿತ ಕೃಷಿ ಕಾರ್ಮಿಕರು ಮತ್ತು ದುರ್ಬಲ ವರ್ಗಗಳ ಜನರಿಗೆ ಋಣ ಪರಿಹಾರ ಒದಗಿಸುವುದು ವಿಹಿತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಇಪ್ಪತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ: –

1. **ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಋಣ ಪರಿಹಾರ ಅಧಿನಿಯಮ, 1976 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) 3,4,7 ಮತ್ತು 8ನೇ ಪ್ರಕರಣಗಳು 1975ರ ಅಕ್ಟೋಬರ್ ಇಪ್ಪತ್ತೊಂದನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು, 5 ಮತ್ತು 6ನೇ ಪ್ರಕರಣಗಳು, 1975ರ ನವೆಂಬರ್ ಹನ್ನೊಂದನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಮತ್ತು 9ನೇ ಪ್ರಕರಣವು, 1975ರ ನವೆಂಬರ್ ಇಪ್ಪತ್ತೆಂಟನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

2. **ಘೋಷಣೆ.–** ಈ ಅಧಿನಿಯಮವು ಭಾರತ ಸಂವಿಧಾನದ 46ನೇ ಅನುಚ್ಛೇದದಲ್ಲಿ ನಿರ್ದಿಷ್ಟಪಡಿಸಿರುವ ತತ್ವಗಳನ್ನು ಅನುಸರಿಸುವ ಸಲುವಾಗಿ ರಾಜ್ಯದ ಕಾರ್ಯನೀತಿಯನ್ನು ಜಾರಿಗೊಳಿಸುವುದಕ್ಕಾಗಿ ಎಂದು ಈ ಮೂಲಕ ಘೋಷಿಸಲಾಗಿದೆ.

3. **ವ್ಯಾಖ್ಯೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) " ಕೃಷಿ " ಎಂದರೆ, ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ:–

(i) ತೋಟಗಾರಿಕೆ ;

(ii) ದವಸಧಾನ್ಯ, ಹುಲ್ಲು ಅಥವಾ ತೋಟಗಾರಿಕಾ ಉತ್ಪನ್ನಗಳನ್ನು ಬೆಳೆಸುವುದು;

(iii) ಹೈನುಗಾರಿಕೆ ;

(iv) ಕೋಳಿ ಸಾಕಣೆ ;

(v) ಜಾನುವಾರು ತಳಿವರ್ಧನೆ ;

(vi) ಹುಲ್ಲುಗಾವಲು.

ಆದರೆ, ಇದು ಮರ ಕತ್ತರಿಸುವುದನ್ನು ಮಾತ್ರ ಒಳಗೊಳ್ಳುವುದಿಲ್ಲ ;

(ಬಿ) "ಋಣ" ಎಂದರೆ ಡಿಕ್ರಿಯಾಗಿರಲಿ ಅಥವಾ ಇಲ್ಲದಿರಲಿ ನಗದು ಅಥವಾ ವಸ್ತು ರೂಪದಲ್ಲಿನ ಯಾವುದೇ ಸಾಲ ಮತ್ತು ಒಟ್ಟಾರೆ ಇದು ಋಣಎಂದು ಹೇಳಲಾಗುವ ಯಾವುದೇ ಮೊತ್ತವನ್ನು ಒಳಗೊಳ್ಳುತ್ತದೆ, ಆದರೆ, ಇದು ಕೇಂದ್ರ ಅಥವಾ ರಾಜ್ಯ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ಬಾಕಿಯಿರುವ ತೆರಿಗೆಗಳ ಬಾಕಿಯನ್ನು ಒಳಗೊಳ್ಳುವುದಿಲ್ಲ;

(ಸಿ) "ಋಣಿ" ಎಂದರೆ,–

(i) ಒಬ್ಬ ಸಣ್ಣ ರೈತ ; ಅಥವಾ

(ii) ಒಬ್ಬ ಭೂರಹಿತ ಕೃಷಿ ಕಾರ್ಮಿಕ ; ಅಥವಾ

(iii) ದುರ್ಬಲ ವರ್ಗಕ್ಕೆ ಸೇರಿದ ಒಬ್ಬ ವ್ಯಕ್ತಿ ;

(ಡಿ) "ಭೂ ರಹಿತ ಕೃಷಿ ಕಾರ್ಮಿಕ" ಎಂದರೆ, ಯಾವುದೇ ಭೂಮಿಯನ್ನು ಹೊಂದಿಲ್ಲದ ಮತ್ತು ಜಮೀನಿನಲ್ಲಿ ದೈಹಿಕ ಶ್ರಮ ದುಡಿಮೆಯು ಮುಖ್ಯವಾದ ಜೀವನಾಧಾರವಾಗಿರುವ ಒಬ್ಬ ವ್ಯಕ್ತಿ ;

(ಇ) "ಸಣ್ಣ ರೈತ" ಎಂದರೆ, ಒಂದು ಘಟಕಕ್ಕಿಂತ ಹೆಚ್ಚಿಲ್ಲದಂತೆ ಜಮೀನನ್ನು, ಅದರ ಮಾಲೀಕನಾಗಿ, ಗುತ್ತಿಗೆದಾರನಾಗಿ ಅಥವಾ ಅಡಮಾನದಾರನಾಗಿ ಅಥವಾ ಭಾಗಶ: ಒಂದು ಅನುಭವದಲ್ಲಿ ಮತ್ತು ಭಾಗಶ: ಇನ್ನೊಂದರಲ್ಲಿ ತನ್ನ ಸ್ವಾಧೀನದಲ್ಲಿ ಹೊಂದಿರುವ ಮತ್ತು ಕೃಷಿಯಿಂದಲ್ಲದೆ ಬೇರೆ ಯಾವ ಮೂಲದಿಂದಲೂ ಆದಾಯವಿಲ್ಲದ ಒಬ್ಬ ವ್ಯಕ್ತಿ;

**ವಿವರಣೆ:–** ಒಬ್ಬ ವ್ಯಕ್ತಿಯು, (ಎಫ್) ಖಂಡದಲ್ಲಿ ಉಲ್ಲೇಖಿಸಲಾದ ಒಂದಕ್ಕಿಂತ ಹೆಚ್ಚು ವರ್ಗಗಳ ಭೂಮಿಯನ್ನು ಹೊಂದಿದ್ದಲ್ಲಿ, ಅವನು ಹೊಂದಿರುವ ಭೂಮಿಯ ವಿಸ್ತೀರ್ಣವನ್ನು, ಈ ಮುಂದಿನ ಸೂತ್ರಕ್ಕನುಸಾರವಾಗಿ ನಿರ್ಧರಿಸತಕ್ಕದ್ದು ಎಂದರೆ :–

ನೀರಾವರಿ ಸೌಲಭ್ಯವಿಲ್ಲದ ಎರಡು ಹೆಕ್ಟೇರ್ ಭೂಮಿ = ಒಂದೂ ಕಾಲು ಹೆಕ್ಟೇರ್ ಮಳೆ ಆಧಾರಿತ ತರಿ ಭೂಮಿ = ಒಂದು ನೀರಾವರಿ ಬೆಳೆ ಬೆಳೆಯಲು ಸೌಲಭ್ಯವನ್ನು ಹೊಂದಿರುವ ಅರ್ಧ ಹೆಕ್ಟೇರ್ ಭೂಮಿ = ಪ್ಲಾಂಟೇಷನ್ ಬೆಳೆಗಳು ಅಥವಾ ದ್ರಾಕ್ಷಿ ಅಥವಾ ತೆಂಗು ಅಥವಾ ಅಡಿಕೆ ಬೆಳೆಯುವುದಕ್ಕಾಗಿ ಅಥವಾ ನೀರಾವರಿ ಮೂಲಕ ಹಿಪ್ಪುನೇರಳೆ ಬೆಳೆಯುವುದಕ್ಕಾಗಿ ಬಳಸಲಾದ ಅರ್ಧ ಹೆಕ್ಟೇರ್ ಭೂಮಿ = ನಿರಂತರ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಅಥವಾ ಒಂದು ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ನೀರಾವರಿ ಬೆಳೆ ಬೆಳೆಯುವುದಕ್ಕಾಗಿ ಸೌಲಭ್ಯಗಳನ್ನು ಹೊಂದಿರುವ ಕಾಲು ಹೆಕ್ಟೇರ್ ಭೂಮಿ.

(ಎಫ್) "ಘಟಕ" ಎಂದರೆ,–

(i) ನೀರಾವರಿ ಸೌಲಭ್ಯವಿಲ್ಲದ ಎರಡು ಹೆಕ್ಟೇರ್ ಭೂಮಿ ; ಅಥವಾ
(ii) ಒಂದೂ ಕಾಲು ಹೆಕ್ಟೇರು ಮಳೆಯಾಧಾರಿತ ತರಿ ಭೂಮಿ ; ಅಥವಾ
(iii) ಒಂದು ನೀರಾವರಿ ಬೆಳೆ ಬೆಳೆಯಲು ಸೌಕರ್ಯವಿರುವ ಅರ್ಧ ಹೆಕ್ಟೇರು ಭೂಮಿ ;
(iv) ಪ್ಲಾಂಟೇಷನ್ ಬೆಳೆಗಳು ಅಥವಾ ದ್ರಾಕ್ಷಿ ಅಥವಾ ತೆಂಗು ಅಥವಾ ಅಡಿಕೆ ಬೆಳೆಯಲು ಬಳಸುವ ಅರ್ಧ ಹೆಕ್ಟೇರು ಭೂಮಿ; ಅಥವಾ
(v) ನೀರಾವರಿ ಮೂಲಕ ಹಿಪ್ಪುನೇರಳೆ ಬೆಳೆಯಲು ಬಳಸಲಾದ ಅರ್ಧ ಹೆಕ್ಟೇರು ಭೂಮಿ ; ಅಥವಾ
(vi) ನಿರಂತರ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಒಂದು ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ನೀರಾವರಿ ಬೆಳೆ ಬೆಳೆಯಲು ಸೌಲಭ್ಯಗಳಿರುವ ಕಾಲು ಹೆಕ್ಟೇರು ಭೂಮಿ ;

**ವಿವರಣೆ.–** ಈ ಖಂಡದಲ್ಲಿ "ಪ್ಲಾಂಟೇಷನ್ ಬೆಳೆ" ಎಂದರೆ, ಏಲಕ್ಕಿ, ಕಾಫಿ, ರಬ್ಬರು ಮತ್ತು ಟೀ;

(ಜಿ) "ದುರ್ಬಲ ವರ್ಗಗಳ ಜನ" ಎಂದರೆ, ಸಣ್ಣ ರೈತರಲ್ಲದ ಅಥವಾ ಭೂರಹಿತ ಕೃಷಿ ಕಾರ್ಮಿಕರಲ್ಲದ ಯಾರ ವಾರ್ಷಿಕ ಆದಾಯವು ಎಲ್ಲ ಮೂಲಗಳಿಂದ ಎರಡು ಸಾವಿರದ ನಾಲ್ಕು ನೂರು ರೂಪಾಯಿಗಳನ್ನು ಮೀರುವುದಿಲ್ಲವೋ ಆ ವ್ಯಕ್ತಿಗಳು.

4. **ಋಣದಿಂದ ಮುಕ್ತಿ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಅಥವಾ ಯಾವುದೇ ಅಂಥ ಕಾನೂನಿನ ಬಲದಿಂದ ಜಾರಿಯಲ್ಲಿರುವ ಯಾವುದೇ ಕರಾರು ಅಥವಾ ಲಿಖಿತದಲ್ಲಿ ಏನೇ ಇದ್ದರೂ, ಮತ್ತು ಈ ಅಧಿನಿಯಮದಲ್ಲಿ ವ್ಯಕ್ತವಾಗಿ ಉಪಬಂಧಿಸಿದುದನ್ನುಳಿದು ಈ ಪ್ರಕರಣದ ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ,–

(ಎ) ಈ ಪ್ರಕರಣವು ಪ್ರಾರಂಭವಾಗುವುದಕ್ಕೆ ಮೊದಲು ಋಣಿಯು ಸಾಲ ಕೊಡುವವನಿಗೆ ಸಂದಾಯ ಮಾಡಬೇಕಾದ ಬಡ್ಡಿ ಹಣ ಯಾವುದಾದರೂ ಇದ್ದರೆ, ಅದನ್ನೂ ಒಳಗೊಂಡಂತೆ ನೀಡಿರುವ ಪ್ರತಿಯೊಂದು ಋಣವನ್ನು ಪೂರ್ಣವಾಗಿ ತೀರಿಸಲಾಗಿದೆ ಎಂದು ಭಾವಿಸತಕ್ಕದ್ದು ;

(ಬಿ) ಯಾವುದೇ ಸಿವಿಲ್ ನ್ಯಾಯಾಲಯವು, ಬಡ್ಡಿ ಯಾವುದಾದರೂ ಇದ್ದರೆ, ಅದನ್ನೂ ಒಳಗೊಂಡಂತೆ ಅಂಥ ಋಣದ ಯಾವುದೇ ಮೊಬಲಗಿನ ವಸೂಲಿಗಾಗಿ ಋಣಿಯ ವಿರುದ್ಧದ ಯಾವುದೇ ದಾವೆ ಅಥವಾ ವ್ಯವಹರಣೆಯನ್ನು ಪುರಸ್ಕರಿಸತಕ್ಕದ್ದಲ್ಲ :

ಆದರೆ, ದಾವೆ ಅಥವಾ ವ್ಯವಹರಣೆಯನ್ನು ಋಣಿಯ ಮತ್ತು ಯಾರೇ ಇತರ ವ್ಯಕ್ತಿಯ ವಿರುದ್ಧ ಜಂಟಿಯಾಗಿ ಹೂಡಿದ್ದಲ್ಲಿ, ಈ ಪ್ರಕರಣದಲ್ಲಿರುವುದು ಯಾವುದೂ, ಅಂಥ ಇತರ ವ್ಯಕ್ತಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಆ ದಾವೆ ಅಥವಾ ವ್ಯವಹರಣೆಯ ಊರ್ಜಿತತೆಗೆ ಅನ್ವಯವಾಗತಕ್ಕದ್ದಲ್ಲ.

(ಸಿ) ಯಾವುದೇ ಅಂಥ ಋಣದ ವಸೂಲಿಗಾಗಿ ಯಾರೇ ಋಣಿಯ ವಿರುದ್ಧ ಸದರಿ ದಿನಾಂಕದಿಂದ ಇತ್ಯರ್ಥದಲ್ಲಿರುವ ಎಲ್ಲ ದಾವೆಗಳು ಮತ್ತು ವ್ಯವಹರಣೆಗಳು, (ಮೇಲ್ಮನವಿಗಳು, ಪರಿಷ್ಕರಣೆಗಳು, ಜಪ್ತಿಗಳು ಅಥವಾ ಅಮಲ್ಜಾರಿಯೂ ಸೇರಿ) ಕೊನೆಗೊಳ್ಳತಕ್ಕದ್ದು :

ಆದರೆ, ಈ ಖಂಡದಲ್ಲಿರುವುದು ಯಾವುದೂ ,–

(i) ಈ ಪ್ರಕರಣವು ಪ್ರಾರಂಭವಾಗವುದಕ್ಕೆ ಮುಂಚೆ ಹೊಂದಿದ್ದ ಮತ್ತು ಕೊನೆಗಾಣಿಸಿದ ಯಾವುದೇ ಚರಾಸ್ತಿಯ;
(ii) ಅಂಥ ಪ್ರಾರಂಭಕ್ಕೆ ಮುಂಚೆ ಸ್ಥಿರೀಕರಿಸಲಾದ ಯಾವುದೇ ಸ್ಥಿರಾಸ್ತಿಯ

– ಮಾರಾಟಕ್ಕೆ ಅನ್ವಯವಾಗತಕ್ಕದ್ದಲ್ಲ.

(ಡಿ) ಯಾವುದೇ ಅಂಥ ಋಣದ ಸಂಬಂಧದಲ್ಲಿ ಸಿವಿಲ್ ನ್ಯಾಯಾಲಯದಿಂದ ಋಣಿಯ ವಿರುದ್ಧ ಹಣಕ್ಕಾಗಿ ಹೊರಡಿಸಲಾದ ಯಾವುದೇ ಡಿಕ್ರಿಯ ಅಮಲ್ಜಾರಿಯಲ್ಲಿ ಸಿವಿಲ್ ಕಾರಾಗೃಹದಲ್ಲಿ ಬಂಧನಕ್ಕೆ ಒಳಗಾಗಿರುವ ಪ್ರತಿಯೊಬ್ಬ ಋಣಿಯನ್ನು ಬಿಡುಗಡೆ ಮಾಡತಕ್ಕದ್ದು ;

(ಇ) ಋಣಿಯು ಅಡಮಾನ ಮಾಡಿದ ಪ್ರತಿಯೊಂದು ಚರ ಸ್ವತ್ತು ಅಂಥ ಋಣಿಯ ಹೆಸರಿನಲ್ಲಿ ಬಿಡುಗಡೆಯಾಗತಕ್ಕದ್ದು ಮತ್ತು ಸಾಲ ನೀಡಿದವನು ಅದನ್ನು ಕೂಡಲೇ ಋಣಿಗೆ ಹಿಂದಿರುಗಿಸಲು ಬದ್ಧನಾಗಿರತಕ್ಕದ್ದು. ಮತ್ತು ಹಾಗೆ ಮಾಡಲು ಸಾಲ ನೀಡಿದವನು ತಪ್ಪಿದರೆ, ಋಣಿಯು, ಅವನು ವಾಸವಾಗಿರುವ ಸ್ಥಳದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಉಪವಿಭಾಗೀಯ ದಂಡಾಧಿಕಾರಿಗೆ [1][ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಯಾರೇ ಇತರ ಕಾರ್ಯನಿರ್ವಾಹಕ ದಂಡಾಧಿಕಾರಿಗೆ][1] ಅರ್ಜಿ ಸಲ್ಲಿಸಿದ ಮೇಲೆ ಅದನ್ನು ವಾಪಸ್ಸು ಪಡೆಯಲು ಹಕ್ಕುಳ್ಳವನಾಗತಕ್ಕದ್ದು;

1. 1976ರ ಅಧಿನಿಯಮ 63ರ ಮೂಲಕ 27.10.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎಫ್) ಸಾಲ ನೀಡುವವನ ಹೆಸರಿನಲ್ಲಿ ಋಣಿಯು ಬರೆದುಕೊಟ್ಟ ಪ್ರತಿಯೊಂದು ಅಡಮಾನ ಪತ್ರವು ವಿಮೋಚನೆಗೊಳ್ಳತಕ್ಕದ್ದು ಮತ್ತು ಅಡಮಾನ ಮಾಡಿದ ಸ್ವತ್ತನ್ನು ಅಂಥ ಋಣಿಯ ಹೆಸರಿನಲ್ಲಿ ಬಿಡುಗಡೆ ಮಾಡತಕ್ಕದ್ದು ಮತ್ತು ಸಾಲ ನೀಡುವವನು ಹಾಗೆ ಮಾಡಲು ತಪ್ಪಿದಲ್ಲಿ, ಅಡಮಾನದ ಸ್ವತ್ತು ಇರುವ ಸ್ಥಳದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಉಪವಿಭಾಗೀಯ ದಂಡಾಧಿಕಾರಿಯು [1][ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ಯಾರೇ ಇತರ ಕಾರ್ಯನಿರ್ವಾಹಕ ದಂಡಾಧಿಕಾರಿಯು][1] ತಾನಾಗಿಯೇ ಅಥವಾ ಋಣಿಯ ಅರ್ಜಿಯ ಮೇಲೆ ಮತ್ತು ಅವನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ನಡೆಸಿದ ನಂತರ, ಋಣಿಗೆ ಸ್ವತ್ತಿನ ಸ್ವಾಧೀನತೆ ನೀಡತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ವಿವರಣೆ:–** ಈ ಪ್ರಕರಣದಲ್ಲಿರುವುದು ಯಾವುದೂ, ಈ ಪ್ರಕರಣವು ಪ್ರಾರಂಭವಾಗುವುದಕ್ಕೆ ಮುಂಚೆ ಋಣಿಯು ಈಗಾಗಲೇ ಮರುಸಂದಾಯ ಮಾಡಿರುವ ಅಥವಾ ಅವನಿಂದ ವಸೂಲು ಮಾಡಿರುವ ಯಾವುದೇ ಋಣದ ಯಾವುದೇ ಭಾಗದ ಮರುಪಾವತಿಗಾಗಿ ಯಾರೇ ಋಣಿಯನ್ನು ಹಕ್ಕುಳ್ಳವನನ್ನಾಗಿ ಮಾಡುವುದೆಂದು ಅರ್ಥೈಸತಕ್ಕದ್ದಲ್ಲ.

5. **ಲೇಣಿದಾರರು ವಿವರ ಪತ್ರವನ್ನು ಸಲ್ಲಿಸುವುದು, ಇತ್ಯಾದಿ.–** (1) 4ನೇ ಪ್ರಕರಣದ (ಇ) ಖಂಡದಲ್ಲಿ ಉಲ್ಲೇಖಿಸಲಾದ ಪ್ರತಿಯೊಬ್ಬ ಲೇಣಿದಾರನು, 1975ರ ನವೆಂಬರ್ ತಿಂಗಳ ಹನ್ನೊಂದನೇ ದಿನದಿಂದ ನಲವತ್ತೈದು ದಿನಗಳೊಳಗಾಗಿ ಅವನಲ್ಲಿ ವಸ್ತುಗಳನ್ನು ಒತ್ತೆ ಇಟ್ಟಿರುವ ಎಲ್ಲ ಋಣಿಗಳ ಹೆಸರುಗಳು, ಒತ್ತೆ ಇಟ್ಟಿರುವ ವಸ್ತುಗಳ ಸ್ವರೂಪ ಮತ್ತು ಅವುಗಳ ವಿವರಗಳು, ಮುಂಗಡ ನೀಡಿರುವ ಮೊತ್ತ, ಮತ್ತು 1975ರ ಅಕ್ಟೋಬರ್ 21ರಂದು ಇರುವ ಬಾಕಿ, ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಒಳಗೊಂಡ ಒಂದು ವಿವರ ಪತ್ರವನ್ನು, ಅಂಥ ಲೇಣಿದಾರನು ಸಾಮಾನ್ಯವಾಗಿ ವ್ಯವಹಾರ ನಡೆಸುವ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಉಪ ವಿಭಾಗೀಯ ದಂಡಾಧಿಕಾರಿಗೆ [1][ಅಥವಾ ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಅಧಿಕೃತಗೊಳಿಸಿದ ಯಾರೇ ಇತರ ಕಾರ್ಯ ನಿರ್ವಾಹಕ ದಂಡಾಧಿಕಾರಿಗೆ, (ಇನ್ನು ಮುಂದೆ ಕಾರ್ಯನಿರ್ವಾಹಕ ದಂಡಾಧಿಕಾರಿ ಎಂದು ಕರೆಯಲಾಗುವ)][1] ಸಲ್ಲಿಸತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಂಥ ವಿವರ ಪತ್ರವನ್ನು ಸ್ವೀಕರಿಸಿದ ನಂತರ ಮತ್ತು ಕರ್ನಾಟಕ ಭೂಕಂದಾಯ ಅಧಿನಿಯಮ, 1964ರಲ್ಲಿ ಉಪಬಂಧಿಸಲಾದ ರೀತಿಯಲ್ಲಿ ಅವನು ಅವಶ್ಯವೆಂದು ಪರಿಗಣಿಸುವ ಕ್ಷಿಪ್ರ ವಿಚಾರಣೆಯನ್ನು ನಡೆಸಿದ ನಂತರ, ಉಪವಿಭಾಗೀಯ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯು][1] ಆದೇಶದ ಮೂಲಕ, ಯಾವ ಋಣಿಗಳು 4ನೇ ಪ್ರಕರಣದ ಅಡಿಯಲ್ಲಿ ಪರಿಹಾರಕ್ಕೆ ಹಕ್ಕು ಹೊಂದಿದ್ದಾರೆ ಎಂಬುದನ್ನು ನಿರ್ಧರಿಸತಕ್ಕದ್ದು ಮತ್ತು ಅಂಥ ಋಣಿಗಳು ಒತ್ತೆ ಇಟ್ಟಿರುವ ವಸ್ತುಗಳನ್ನು, ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಂದು ಅಥವಾ ಅದಕ್ಕೂ ಮುಂಚೆ ಹಾಜರುಪಡಿಸುವಂತೆ ಲೇಣಿದಾರನಿಗೆ ನಿರ್ದೇಶಿಸತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) (2)ನೇ ಉಪಪ್ರಕರಣದ ಮೇರೆಗೆ ಲೇಣಿದಾರನು, ಆ ಆದೇಶದಲ್ಲಿ ನಿರ್ದೇಶಿಸಿದಂತೆ ವಸ್ತುವನ್ನು ಹಾಜರುಪಡಿಸಲು ತಪ್ಪಿದಲ್ಲಿ, ಉಪ ವಿಭಾಗೀಯ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯು][1] ಲೇಣೆದಾರನಿಂದ ವಸ್ತುಗಳ ಸ್ವಾಧೀನತೆಯನ್ನು ತೆಗೆದುಕೊಳ್ಳಬಹುದು ಮತ್ತು ಈ ಉದ್ದೇಶಕ್ಕಾಗಿ ಅವನು ಶೋಧನೆ ಮತ್ತು ಜಫ್ತಿಯ ಸಂಬಂಧದಲ್ಲಿ 1973ರ ದಂಡ ಪ್ರಕ್ರಿಯಾ ಸಂಹಿತೆಯ ಮೇರೆಗೆ ಅವನಲ್ಲಿ ನಿಹಿತವಾಗಿರುವಂಥಹವೇ ಅಧಿಕಾರಗಳನ್ನು ಚಲಾಯಿಸತಕ್ಕದ್ದು .

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಒತ್ತೆ ಇಡಲಾದ ವಸ್ತುವನ್ನು ಹಾಜರುಪಡಿಸಿದ ಅಥವಾ ವಾಪಸು ಪಡೆದ ತರುವಾಯ ಉಪವಿಭಾಗೀಯ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯು][1] ವಸ್ತುವನ್ನು ಋಣಿಗೆ ಒಪ್ಪಿಸತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(5) 4ನೇ ಪ್ರಕರಣದ (ಎಫ್) ಖಂಡದಲ್ಲಿ ಉಲ್ಲೇಖಿಸಲಾದ ಪ್ರತಿಯೊಬ್ಬ ಲೇಣಿದಾರನು, 1976ರ ಮಾರ್ಚ್ ಮೊದಲ ದಿನದಿಂದ 45 ದಿನಗಳೊಳಗಾಗಿ, ಅವನಲ್ಲಿ ಸ್ವತ್ತುಗಳನ್ನು ಅಡಮಾನ ಮಾಡಿರುವ ಎಲ್ಲ ಋಣಿಗಳ ಹೆಸರುಗಳು, ಅಂಥ ಸ್ವತ್ತುಗಳ ಪೂರ್ಣ ವಿವರಗಳು, ನೀಡಿರುವ ಮೊತ್ತ ಮತ್ತು 1975ರ ಅಕ್ಟೋಬರ್ 21ರಂದು ಇರುವ ಬಾಕಿ ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಒಳಗೊಂಡಿರುವ ವಿವರ ಪತ್ರವನ್ನು ಅಂಥ ಲೇಣಿದಾರನು ಸಾಮಾನ್ಯವಾಗಿ ವಾಸವಾಗಿರುವ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಇರುವ ಉಪವಿಭಾಗೀಯ ದಂಡಾಧಿಕಾರಿ, [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿ][1] ಗೆ ಒದಗಿಸತಕ್ಕದ್ದು. ಅಂಥ ವಿವರ ಪತ್ರವನ್ನು ಸ್ವೀಕರಿಸಿದ ನಂತರ, ಉಪವಿಭಾಗೀಯ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿ][1] ಆದೇಶದ ಮೂಲಕ, ಯಾವ ಋಣಿಗಳು 4ನೇ ಪ್ರಕರಣದ ಅಡಿಯಲ್ಲಿ ಪರಿಹಾರಕ್ಕೆ ಹಕ್ಕುಳ್ಳವರಾಗಿದ್ದಾರೆ ಎಂಬುದನ್ನು ನಿರ್ಧರಿಸತಕ್ಕದ್ದು ಮತ್ತು ಲೇಣಿದಾರನು ಅಡಮಾನ ಪತ್ರದ ಮೇಲೆ ವಿಮೋಚನೆಯ ಹಿಂಬರಹವನ್ನು ಮಾಡುವಂತೆ ಮತ್ತು ಅದನ್ನು ಋಣಿಗೆ ಒಪ್ಪಿಸುವಂತೆ ನಿರ್ದೇಶಿಸತಕ್ಕದ್ದು. ಅಂಥ ಸ್ವತ್ತು ಲೇಣಿದಾರನ ಸ್ವಾಧೀನದಲ್ಲಿರುವಲ್ಲಿ ಅವನು ಅದನ್ನು ಋಣಿಗೆ ಒಪ್ಪಿಸತಕ್ಕದ್ದು. ಲೇಣಿದಾರನು ಹಾಗೆ ಮಾಡಲು ತಪ್ಪಿದಲ್ಲಿ, ಉಪವಿಭಾಗ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯ ನಿರ್ವಾಹಕ ದಂಡಾಧಿಕಾರಿಯು][1] ವಿಮೋಚನೆ ಮಾಡಿದ ಸಂಗತಿಯನ್ನು ಸ್ವತ: ದಾಖಲಿಸತಕ್ಕದ್ದು ಮತ್ತು ಆ ಬಗ್ಗೆ ಋಣಿಗೆ ಒಂದು ಪ್ರಮಾಣ ಪತ್ರ ನೀಡತಕ್ಕದ್ದು ಮತ್ತು ಅವಶ್ಯವಾಗಬಹುದಾದಂಥ ಬಲವನ್ನು ಬಳಸಿ ಸ್ವತ್ತಿನ ಸ್ವಾಧೀನತೆಯನ್ನು ಋಣಿಗೆ ಒಪ್ಪಿಸತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(6) ಈ ಪ್ರಕರಣದ ಮೇರೆಗೆ ಉಪ ವಿಭಾಗೀಯ ದಂಡಾಧಿಕಾರಿಯ [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯ][1] ಪ್ರತಿಯೊಂದು ಆದೇಶವು ಅಂತಿಮವಾಗಿರತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(7) ಈ ಪ್ರಕರಣದ ಮೇರೆಗಿನ ವ್ಯವಹರಣೆಯಲ್ಲಿ ಯಾರೇ ನ್ಯಾಯವಾದಿಯು ಉಪವಿಭಾಗೀಯ ದಂಡಾಧಿಕಾರಿಯ [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯ][1] ಮುಂದೆ ಹಾಜರಾಗಲು ಅನುಮತಿಸತಕ್ಕದ್ದಲ್ಲ.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(8) (2)ನೇ ಉಪ ಪ್ರಕರಣದ ಮೇರೆಗಿನ ಪ್ರಶ್ನೆಯ ನಿರ್ಧರಣೆ ಇತ್ಯರ್ಥದಲ್ಲಿರುವಾಗ, ಯಾರೇ ಲೇಣಿದಾರನು ಒತ್ತೆ ಇಡಲಾದ ವಸ್ತುಗಳನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ವಿಲೆ ಮಾಡತಕ್ಕದ್ದಲ್ಲ.

(9) ಹಿಂದಿನ ಉಪ ಪ್ರಕರಣದಲ್ಲಿ ಏನೇ ಇದ್ದರೂ, ಉಪ ವಿಭಾಗೀಯ ದಂಡಾಧಿಕಾರಿಯು [1][ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಕ ದಂಡಾಧಿಕಾರಿಯು][1] ಋಣಿಯು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ಅನ್ಯಥಾ ಲೇಣಿದಾರನ ಯಾವುದೇ ಆವರಣವನ್ನು ಪ್ರವೇಶಿಸಬಹುದು ಮತ್ತು ಋಣಿಗಳು ಒತ್ತೆ ಇಟ್ಟಿರುವ ವಸ್ತುಗಳನ್ನು ಶೋಧಿಸಬಹುದು ಮತ್ತು ಜಫ್ತಿ ಮಾಡಬಹುದು ಮತ್ತು ಅವುಗಳ ಸುರಕ್ಷಿತ ರಕ್ಷಣೆಗಾಗಿ ವ್ಯವಸ್ಥೆಮಾಡಬಹುದು. ಆ ನಂತರ ಅವರು ಹಾಗೆ ಜಪ್ತಿಮಾಡಿದ ಯಾವ ವಸ್ತುಗಳನ್ನು ಋಣಿಗಳಿಗೆ ಬಿಡುಗಡೆ ಮಾಡಬೇಕಾಗಿದೆ ಎಂಬುದನ್ನು ನಿರ್ಧರಿಸಲು ಮುಂದುವರೆಯತಕ್ಕದ್ದು ಮತ್ತು ತದನುಸಾರವಾಗಿ ಆದೇಶಗಳನ್ನು ಹೊರಡಿಸತಕ್ಕದ್ದು.

1. 1976ರ ಅಧಿನಿಯಮ 63ರ ಮೂಲಕ 27.10.1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

6. **ದಂಡನೆ.–** (1) ವಿವರ ಪತ್ರವನ್ನು ಒದಗಿಸಲು ಅಥವಾ 5ನೇ ಪ್ರಕರಣದ ಮೇರೆಗೆ ಮಾಡಿದ ಆದೇಶಗಳನ್ನು ಪಾಲಿಸಲು ತಪ್ಪುವ ಅಥವಾ 5ನೇ ಪ್ರಕರಣದ ಉಪಬಂಧಗಳನ್ನು ಅನ್ಯಥಾ ಉಲ್ಲಂಘಿಸುವ ಯಾರೇ ವ್ಯಕ್ತಿಯು, ಮೂರು ತಿಂಗಳಿಗಿಂತ ಕಡಿಮೆ ಇಲ್ಲದ ಆದರೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಸೆರೆಮನೆವಾಸ ಶಿಕ್ಷೆಗೆ ಮತ್ತು ಒಂದು ಸಾವಿರ ರೂಪಾಯಿಗಳಿಗಿಂತ ಕಡಿಮೆ ಇಲ್ಲದ, ಆದರೆ ಐದುಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗೆ ಗುರಿಯಾಗತಕ್ಕದ್ದು.

(2) (1)ನೇ ಉಪ ಪ್ರಕರಣದ ಮೇರೆಗೆ ದಂಡನೀಯವಾದ ಪ್ರತಿಯೊಂದು ಅಪರಾಧವು ನ್ಯಾಯ ವಿಚಾರಣೆಗೆ ಒಳಪಟ್ಟಿರತಕ್ಕದ್ದು.

7. **ರುಜುವಾತಿನ ಹೊಣೆ.–** ಯಾವುದೇ ಕಾನೂನಿನಲ್ಲಿ, ಯಾವುದೇ ದಾವೆಯಲ್ಲಿ ಅಥವಾ ಯಾವುದೇ ವ್ಯವಹರಣೆಯಲ್ಲಿ ಏನೇ ಒಳಗೊಂಡಿದ್ದರೂ, ಋಣಿಯು ಈ ಅಧಿನಿಯಮದ ಸಂರಕ್ಷಣೆಗೆ ಹಕ್ಕುಳ್ಳವನಲ್ಲವೆಂದು ರುಜುವಾತುಪಡಿಸುವ ಹೊಣೆ ಲೇಣಿದಾರನ ಮೇಲಿರತಕ್ಕದ್ದು.

8. **ಕೆಲವು ಋಣಗಳು ಮತ್ತು ಹೊಣೆಗಾರಿಕೆಗಳು ಬಾಧಿತಗೊಳ್ಳದಿರುವುದು.–** ಈ ಅಧಿನಿಯಮದಲ್ಲಿರುವ ಯಾವುದೂ, ಸಣ್ಣ ರೈತರ, ಭೂರಹಿತ ಕೃಷಿ ಕಾರ್ಮಿಕರ ಮತ್ತು ದುರ್ಬಲ ವರ್ಗದ ಜನರ ಈ ಮುಂದಿನ ವರ್ಗಗಳ ಋಣಗಳು ಮತ್ತು ಹೊಣೆಗಾರಿಕೆಗಳಿಗೆ ಬಾಧಕವುಂಟುಮಾಡತಕ್ಕದ್ದಲ್ಲ:–

(ಎ) ಅಂಥ ಋಣಿಗಳಿಗೆ ಬಿಟ್ಟುಕೊಟ್ಟ ಯಾವುದೇ ಸ್ವತ್ತಿನ ಸಂಬಂಧದಲ್ಲಿ ಬಾಕಿ ಇರುವ ಯಾವುದೇ ಬಾಡಿಗೆ;

(ಬಿ) ಕಂತು ಖರೀದಿ ಒಪ್ಪಂದದ ಅಡಿಯಲ್ಲಿ ಬಾಕಿ ಇರುವ ಯಾವುದೇ ಮೊಬಲಗು ;

(ಸಿ) ಭೂಕಂದಾಯದ ಬಾಕಿಯಂತೆ ವಸೂಲಿಯಾಗಬೇಕಾದ ಯಾವುದೇ ಮೊಬಲಗು ;

(ಡಿ) ನಂಬಿಕೆದ್ರೋಹ ಅಥವಾ ಯಾವುದೇ ಹಿಂಸೆಯಿಂದ ಉಂಟಾಗುವ ಯಾವುದೇ ಹೊಣೆಗಾರಿಕೆ;

(ಇ) ಸಲ್ಲಿಸಲಾದ ಸೇವೆಗೆ ಸಂಬಳ ಅಥವಾ ಅನ್ಯಥಾ ಬಾಕಿ ಇರುವ ಮಜೂರಿಗಳು ಅಥವಾ ಪರಿಶ್ರಮಧನದ ಸಂಬಂಧದಲ್ಲಿ ಯಾವುದೇ ಹೊಣೆಗಾರಿಕೆ ;

(ಎಫ್) ನ್ಯಾಯಾಲಯದ ಡಿಕ್ರಿಯ ಮೇರೆಗಿರಲಿ ಅಥವಾ ಅನ್ಯಥಾ ಆಗಲಿ ಜೀವನಾಂಶದ ಸಂಬಂಧದಲ್ಲಿ ಯಾವುದೇ ಹೊಣೆಗಾರಿಕೆ ;

(ಜಿ) ಈ ಮುಂದಿನವುಗಳಿಗೆ ಬಾಕಿ ಇರುವ ಋಣ ,–

(i) ಕೇಂದ್ರ ಸರ್ಕಾರ ಅಥವಾ ಯಾವುದೇ ರಾಜ್ಯ ಸರ್ಕಾರ ;

(ii) ಯಾವುದೇ ಸ್ಥಳೀಯ ಪ್ರಾಧಿಕಾರ;

(iii) ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆಗಳು ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ (1975ರ ಕರ್ನಾಟಕ ಅಧಿನಿಯುಮ ಸಂ.2) ವ್ಯಾಖ್ಯೆಗೊಳಿಸಲಾದಂಥ ಒಂದು ಸಾಲ ಏಜನ್ಸಿ ;

(iv) ಕಂಪನಿಗಳ ಅಧಿನಿಯಮ, 1956ರ ಅರ್ಥವ್ಯಾಪ್ತಿಯೊಳಗೆ ಬರುವ ಯಾವುದೇ ಸರ್ಕಾರಿ ಕಂಪನಿ ;

(v) ಭಾರತೀಯ ಜೀವ ವಿಮಾ ನಿಗಮ ;

(vi) ಒಂದು ಸಹಕಾರ ಸಂಘ ; ಮತ್ತು

(ಹೆಚ್) ಅಂಥ ಋಣಿಯು ಖರೀದಿಸಿದ ಸರಕುಗಳ ಬೆಲೆಯನ್ನು ಪ್ರತಿನಿಧಿಸುವ ಯಾವುದೇ ಋಣ.

9. **ನಿಯಮ ರಚನಾಧಿಕಾರ.–** ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸಲು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

10. **ಕರ್ನಾಟಕ ಅಧ್ಯಾದೇಶಗಳ ಸಂ. 1975ರ 15, 1975ರ 19 ಮತ್ತು 1975ರ 21– ಇವುಗಳ ನಿರಸನ.–** (1) ಕರ್ನಾಟಕ ಋಣ ಪರಿಹಾರ ಅಧ್ಯಾದೇಶ, 1975 (1975ರ ಕರ್ನಾಟಕ ಅಧ್ಯಾದೇಶ ಸಂ. 15), ಕರ್ನಾಟಕ ಋಣ ಪರಿಹಾರ (ತಿದ್ದುಪಡಿ) ಅಧ್ಯಾದೇಶ, 1975 [1975ರ ಕರ್ನಾಟಕ ಅಧ್ಯಾದೇಶ ಸಂ.19) ಮತ್ತು ಕರ್ನಾಟಕ ಋಣ ಪರಿಹಾರ (ಎರಡನೇ ತಿದ್ದುಪಡಿ)[1] ಅಧ್ಯಾದೇಶ, 1975 (1975ರ ಕರ್ನಾಟಕ ಅಧ್ಯಾದೇಶ ಸಂ. 21) ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸಿತವಾಗಿದ್ದರೂ , ಸದರಿ ಅಧ್ಯಾದೇಶಗಳ ಮೇರೆಗೆ ಮಾಡಿದ ಯಾವುದೇ ಕಾರ್ಯವನ್ನು ಅಥವಾ ಕೈಗೊಂಡ ಯಾವುದೇ ಕ್ರಮವನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಮೇರೆಗೆ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

The above translation of the Karnataka Debt Relief Act 1976, (Karnataka Act 25 of 1976) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 973

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 38 ರಾಶಾಪ್ರ 2006, ಬೆಂಗಳೂರು, ದಿನಾಂಕ: 4ನೇ ಮೇ 2006**

ಕರ್ನಾಟಕ ಶರೀರ ರಚನಾ ಶಾಸ್ತ್ರ ಅಧಿನಿಯಮ, 1957ರ (1957ರ 23) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಶರೀರ ರಚನಾ ಶಾಸ್ತ್ರ ಅಧಿನಿಯಮ, 1957
## ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1957ರ ಅಧಿನಿಯಮ 23.–** ವೈದ್ಯಕೀಯ ಸಂಸ್ಥೆಗಳಲ್ಲಿ ಶೈಕ್ಷಣಿಕ ಉದ್ದೇಶಗಳಿಗಾಗಿ ಮೃತ ವ್ಯಕ್ತಿಗಳ ದೇಹಗಳನ್ನು ಪಡೆದುಕೊಳ್ಳುವಲ್ಲಿ ಸಾಕಷ್ಟು ತೊಂದರೆಗಳು ಉಂಟಾಗುವುದು ಅನುಭವಕ್ಕೆ ಬಂದಿರುವುದರಿಂದ ಆಸ್ಪತ್ರೆಗಳಿಗೆ ಮತ್ತು ವೈದ್ಯಕೀಯ ಮತ್ತು ಬೋಧನಾ ಸಂಸ್ಥೆಗಳಿಗೆ ಮೃತ ವ್ಯಕ್ತಿಗಳ ಹಕ್ಕು ಸಾಧಿಸದ ದೇಹಗಳನ್ನು ಸರಬರಾಜು ಮಾಡುವುದಕ್ಕೆ ಉಪಬಂಧ ಕಲ್ಪಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಇಂಥದೇ ಅಧಿನಿಯಮಗಳು ಮೈಸೂರು ರಾಜ್ಯದೊಂದಿಗೆ ಸಂಯೋಜಿತವಾದ ಹಿಂದಿನ ಮದ್ರಾಸ್, ಮುಂಬಯಿ ಮತ್ತು ಹೈದರಾಬಾದ್ ರಾಜ್ಯಗಳ ಪ್ರದೇಶಗಳಲ್ಲಿ ಈಗಾಗಲೇ ಜಾರಿಯಲ್ಲಿದ್ದವು. ಈ ಅಧಿನಿಯಮಗಳನ್ನು ನಿರಸನಗೊಳಿಸುವುದು ಮತ್ತು ಈ ವಿಷಯಕ್ಕೆ ಸಂಬಂಧಿಸಿದಂತೆ ರಾಜ್ಯದ ಎಲ್ಲ ಪ್ರದೇಶಗಳಿಗೆ ಅನ್ವಯವಾಗುವಂತೆ ಒಂದು ಏಕ ರೂಪದ ಕಾನೂನನ್ನು ತರಲು ಒಂದು ಹೊಸ ಅಧಿನಿಯಮವನ್ನು ಅಧಿನಿಯಮಿಸುವುದು ಅಗತ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

(1957ರ ಜೂನ್ 21 ನೇ ದಿನಾಂಕದ ವಿ.ಸ. ವಿಧೇಯಕ ಸಂಖ್ಯೆ 5661 ರಿಂದ ಪಡೆದುಕೊಳ್ಳಲಾಗಿದೆ.)

**II**

**1999ರ ತಿದ್ದುಪಡಿ ಅಧಿನಿಯಮ 15.–** ಒಬ್ಬ ವ್ಯಕ್ತಿಯ ಮರಣಕ್ಕೂ ಮುನ್ನ ಅವನು ತನ್ನ ದೇಹ ಅಥವಾ ಅದರ ಯಾವುದೇ ಭಾಗದ ಶಾರೀರಿಕ ಪರೀಕ್ಷೆ ಮಾಡಲು ಅಥವಾ ಅದನ್ನು ಕೊಯ್ದು ಪರೀಕ್ಷಿಸಲು ಅಥವಾ ಅಂಥದೇ ಉದ್ದೇಶಕ್ಕಾಗಿ ದಾನ ಮಾಡುವುದಕ್ಕೆ ಸಂಬಂಧಿಸಿದಂತೆ ತನ್ನ ಆಶಯವನ್ನು ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳ ಸಮ್ಮುಖದಲ್ಲಿ ಲಿಖಿತದಲ್ಲಿ ವ್ಯಕ್ತಪಡಿಸಲು ಸಮರ್ಥನಾಗುವಂತೆ ಮಾಡುವುದಕ್ಕೆ ಉಪಬಂಧ ಕಲ್ಪಿಸಲು ಕರ್ನಾಟಕ ಶರೀರ ರಚನಾ ಶಾಸ್ತ್ರ ಅಧಿನಿಯಮ, 1957ಕ್ಕೆ ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿ.ಸ.ವಿಧೇಯಕ ಸಂಖ್ಯೆ 1998 ರ 1 ರಿಂದ ಪಡೆದುಕೊಳ್ಳಲಾಗಿದೆ.)

1957 ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 23

*(1957ರ ಸೆಪ್ಟೆಂಬರ್ ಹತ್ತೊಂಬತ್ತನೇ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ)*

[1][ಕರ್ನಾಟಕ][1] ಶರೀರ ರಚನಾ ಶಾಸ್ತ್ರ ಅಧಿನಿಯಮ, 1957

*(1957ರ ಸೆಪ್ಟೆಂಬರ್ ಹದಿಮೂರನೇ ದಿನಾಂಕದಂದು ರಾಜ್ಯಪಾಲರ ಸಮ್ಮತಿಯನ್ನು ಪಡೆದಿದೆ)*

(1999ರ ಅಧಿನಿಯಮ 15ರ ಮೂಲಕ ತಿದ್ದುಪಡಿಯಾದಂತೆ)

**ಆಸ್ಪತ್ರೆಗಳಿಗೆ ಮತ್ತು ವೈದ್ಯಕೀಯ ಮತ್ತು ಬೋಧನಾ ಸಂಸ್ಥೆಗಳಿಗೆ ಮೃತ ವ್ಯಕ್ತಿಗಳ ಹಕ್ಕು ಸಾಧಿಸದ (ಕ್ಲೇಮು ಮಾಡದ) ದೇಹಗಳನ್ನು [2][ಅಥವಾ ದಾನಮಾಡಿದ ಮೃತ ದೇಹಗಳು ಅಥವಾ ಅವುಗಳ ಯಾವುದೇ ಭಾಗವನ್ನು][2] ಶಾರೀರಿಕ ರಚನಾ ಪರೀಕ್ಷೆ ಮಾಡಲು ಮತ್ತು ಕೊಯ್ದು ಪರೀಕ್ಷಿಸಲು ಮತ್ತು ಅಂಥದೇ ಇತರ ಉದ್ದೇಶಗಳಿಗಾಗಿ ಒದಗಿಸಲು ಉಪಬಂಧಿಸುವ ಒಂದು ಅಧಿನಿಯಮ.**

ಆಸ್ಪತ್ರೆಗಳಿಗೆ ಮತ್ತು ವೈದ್ಯಕೀಯ ಮತ್ತು ಬೋಧನಾ ಸಂಸ್ಥೆಗಳಿಗೆ ಮೃತ ವ್ಯಕ್ತಿಗಳ ದೇಹಗಳನ್ನು ಹಕ್ಕು ಸಾಧಿಸದ (ಕ್ಲೇಮು ಮಾಡದ) [2][ಅಥವಾ ದಾನ ಮಾಡಿದ ಮೃತ ದೇಹಗಳು ಅಥವಾ ಅವುಗಳ ಯಾವುದೇ ಭಾಗವನ್ನು][2] ಶಾರೀರಿಕ ರಚನಾ ಪರೀಕ್ಷೆ ಮಾಡಲು ಮತ್ತು ಕೊಯ್ದು ಪರೀಕ್ಷಿಸಲು ಮತ್ತು ಅಂಥದೇ ಇತರ ಉದ್ದೇಶಗಳಿಗಾಗಿ ಒದಗಿಸಲು ಉಪಬಂಧಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಎಂಟನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1999ರ ಅಧಿನಿಯಮ 15ರ ಮೂಲಕ ಸೇರಿಸಲಾಗಿದೆ.

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಶರೀರ ರಚನಾ ಶಾಸ್ತ್ರ ಅಧಿನಿಯಮ, 1957 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ಕರ್ನಾಟಕ ರಾಜ್ಯ ][1] ಕ್ಕೆ ಅನ್ವಯವಾಗತಕ್ಕದ್ದು.

(3) ಇದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೂಡಲೇ ಮತ್ತು ರಾಜ್ಯದ ಇತರ ಪ್ರದೇಶದಲ್ಲಿ, ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲಕಾಲಕ್ಕೆ ಗೊತ್ತುಪಡಿಸಬಹುದಾದಂಥ [2][ದಿನಾಂಕ ಅಥವಾ ದಿನಾಂಕಗಳಂದು][2] ಜಾರಿಗೆ ಬರತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಅಧಿನಿಯಮವು, ಮೈಸೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 4.9.1958ರಿಂದ, ಬೆಂಗಳೂರು, ಕೊಡಗು, ಹಾಸನ, ಮಂಡ್ಯ, ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು, ಕೋಲಾರ, ಶಿವಮೊಗ್ಗ, ರಾಯಚೂರು ಜಿಲ್ಲೆಗಳಲ್ಲಿ 2.8.1960 ರಿಂದ ಮತ್ತು ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ 1.6.1961ರಿಂದ ಜಾರಿಗೆ ಬಂದಿದೆ. ಅಧಿನಿಯಮವು ಇಡೀ ರಾಜ್ಯದಾದ್ಯಂತ 11.7.2000ದಿಂದ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

2. **ವ್ಯಾಖ್ಯೆಗಳು.–** (1) ಈ ಅಧಿನಿಯಮದಲ್ಲಿ, ವಿಷಯ ಅಥವಾ ಸಂದರ್ಭಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು,–

(ಎ) "ಅಂಗೀಕೃತ ಸಂಸ್ಥೆ" ಎಂದರೆ, ಈ ಅಧಿನಿಯಮದ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಅಂಗೀಕೃತ ಸಂಸ್ಥೆ ಎಂದು ಘೋಷಿಸಿದ ಒಂದು ಆಸ್ಪತ್ರೆ ಅಥವಾ ವೈದ್ಯಕೀಯ ಕಾಲೇಜು ಅಥವಾ ಒಂದು ಸಂಬಂಧಿತ ಸಂಸ್ಥೆ ;

(ಬಿ) "ಅಧಿಕೃತ ಅಧಿಕಾರಿ" ಎಂದರೆ, 3 ನೇ ಪ್ರಕರಣದ ಅಡಿಯಲ್ಲಿ ಅಧಿಕೃತನಾದ ಅಧಿಕಾರಿ ;

(ಸಿ) "ಆಸ್ಪತ್ರೆ" ಎಂದರೆ, ರಾಜ್ಯ ಸರ್ಕಾರ ಅಥವಾ ಯಾವುದೇ ಮುನಿಸಿಪಲ್ ಕಾರ್ಪೋರೇಷನ್, ಮುನಿಸಿಪಲ್ ಕೌನ್ಸಿಲ್, ಮುನಿಸಿಪಲ್ ಬರೋ, ಜಿಲ್ಲಾ ಮುನಿಸಿಪಾಲಿಟಿ, ಜಿಲ್ಲಾ ಮಂಡಲಿ ಅಥವಾ ಪಂಚಾಯತಿಯಿಂದ ಸ್ಥಾಪಿತವಾದ ಅಥವಾ ನಿರ್ವಹಿಸಲ್ಪಡುವ ಯಾವುದೇ ಆಸ್ಪತ್ರೆ ಮತ್ತು ಇದರಲ್ಲಿ, ಈ ಅಧಿನಿಯಮದ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಘೋಷಿಸಬಹುದಾದಂಥ ಇತರ ಯಾವುದೇ ಆಸ್ಪತ್ರೆಯೂ ಒಳಗೊಳ್ಳುತ್ತದೆ ;

(ಡಿ) "ಹಿತಾಸಕ್ತ ವ್ಯಕ್ತಿ" ಎಂದರೆ, ಮೃತನ ಧಾರ್ಮಿಕ ಆಚರಣೆ ಅಥವಾ ಸಾಮಾಜಿಕ ಪದ್ಧತಿಗನುಸಾರವಾಗಿ ಮೃತವ್ಯಕ್ತಿಯ ದೇಹವನ್ನು ವಿಲೇವಾರಿ ಮಾಡುವಲ್ಲಿ ಹಿತಾಸಕ್ತಿಯಿರುವ ಹತ್ತಿರದ ಸಂಬಂಧಿ ಅಥವಾ ಇತರ ಯಾರೇ ವ್ಯಕ್ತಿ;

***ವಿವರಣೆ.–*** ಈ ಖಂಡದ ಉದ್ದೇಶಕ್ಕಾಗಿ "ಹತ್ತಿರದ ಸಂಬಂಧಿ" ಎಂದರೆ, ಮೃತ ವ್ಯಕ್ತಿಯ ಈ ಮುಂದಿನ ಸಂಬಂಧಿಗಳು, ಎಂದರೆ, ಪತ್ನಿ, ಪತಿ, ತಂದೆ – ತಾಯಿ, ಮಗ, ಮಗಳು, ಸಹೋದರ ಅಥವಾ

ಸಹೋದರಿ ಮತ್ತು ಇದು ಮೃತ ವ್ಯಕ್ತಿಯ (i) ಮೂರು ತಲೆಮಾರುಗಳೊಳಗಿನ ಪಿತೃವಂಶೀಯ ರಕ್ತಸಂಬಂಧಿಯ ಮೂಲಕ ಅಥವಾ ಆರು ತಲೆಮಾರುಗಳೊಳಗಿನ ದಾಯಾದಿ ರಕ್ತ ಸಂಬಂಧಿಯ ಮೂಲಕ, ಅಥವಾ (ii) ಮೇಲೆ ಹೇಳಲಾದ ಯಾವುದೇ ಸಂಬಂಧಿಗಳನ್ನು ವಿವಾಹವಾಗುವುದರ ಮೂಲಕ ಆತನಿಗೆ ಸಂಬಂಧಿಯಾದ ಇತರ ಯಾರೇ ವ್ಯಕ್ತಿಗಳು ಒಳಗೊಳ್ಳುತ್ತಾರೆ. "ಪಿತೃವಂಶೀಯ ರಕ್ತಸಂಬಂಧಿ" ಮತ್ತು "ದಾಯಾದಿ ರಕ್ತ ಸಂಬಂಧಿ" ಎಂಬ ಪದ ಪ್ರಯೋಗಗಳು ಭಾರತ ಉತ್ತರಾಧಿಕಾರ ಅಧಿನಿಯಮ, 1925 (1925ರ ಕೇಂದ್ರ ಅಧಿನಿಯಮ XXXIX) ರಲ್ಲಿ ಅದಕ್ಕೆ ನೀಡಲಾಗಿರುವ ಅರ್ಥವನ್ನೇ ಹೊಂದಿರತಕ್ಕದ್ದು ಮತ್ತು ಸಂಬಂಧಿತ ತಲೆಮಾರುಗಳನ್ನು ಆ ಅಧಿನಿಯಮದಲ್ಲಿ ನಿರೂಪಿಸಲಾದ ರೀತಿಯಲ್ಲಿಯೇ ಪರಿಗಣಿಸತಕ್ಕದ್ದು;

(ಇ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಎಫ್) "ಹಕ್ಕು ಸಾಧಿಸದ ದೇಹ" ಎಂದರೆ, ಆಸ್ಪತ್ರೆ, ಕಾರಾಗೃಹ ಅಥವಾ ಸಾರ್ವಜನಿಕ ಸ್ಥಳ ಅಥವಾ ಸಾರ್ವಜನಿಕ ವ್ಯಕ್ತಿಗಳು ಬಂದು ಹೋಗಲು ಅವಕಾಶವಿರುವ ಸ್ಥಳದಲ್ಲಿ ಮೃತನಾದ ಮತ್ತು ನಿಯಮಿಸಬಹುದಾದಂಥ ಕಾಲದೊಳಗೆ ಯಾರೇ ಹಿತಾಸಕ್ತ ವ್ಯಕ್ತಿಯು ಹಕ್ಕು ಸಾಧಿಸದ ಮೃತ ವ್ಯಕ್ತಿಯ ದೇಹ.

(2) [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 (1899ರ ಕರ್ನಾಟಕ ಅಧಿನಿಯಮ III) ಇದು ಕರ್ನಾಟಕ ಅಧಿನಿಯಮದ ವ್ಯಾಖ್ಯಾನಕ್ಕೆ ಅನ್ವಯಿಸುವಂತೆಯೇ ಈ ಅಧಿನಿಯಮದ ವ್ಯಾಖ್ಯಾನಕ್ಕೂ ಅನ್ವಯಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**3. 4ನೇ ಪ್ರಕರಣದ ಮೇರೆಗೆ ಕಾರ್ಯ ನಿರ್ವಹಿಸಲು ಅಧಿಕಾರಿಗಳಿಗೆ ಅಧಿಕಾರ ನೀಡಲು ರಾಜ್ಯ ಸರ್ಕಾರದ ಅಧಿಕಾರ.–** (1) ರಾಜ್ಯ ಸರ್ಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಈ ಅಧಿನಿಯಮವು ಜಾರಿಯಲ್ಲಿ ಬಂದ ಪ್ರದೇಶ ಅಥವಾ ಅದರ ಭಾಗಕ್ಕೆ 4 ನೇ ಪ್ರಕರಣದ ಮೇರೆಗೆ ಯಾರಿಗೆ ವರದಿ ಸಲ್ಲಿಸಬೇಕಾಗಿದೆಯೋ ಆ ಅಧಿಕಾರಿ, ಆ ಒಬ್ಬ ಅಥವಾ ಹೆಚ್ಚಿನ ಅಧಿಕಾರಿಗಳಿಗೆ ಅಧಿಕಾರ ನೀಡತಕ್ಕದ್ದು ಮತ್ತು ಅಂಥ ಅಧಿಕಾರಿ ಅಥವಾ ಅಧಿಕಾರಿಗಳು ಸದರಿ ಪ್ರಕರಣದ ಮೇರೆಗೆ ಕಾರ್ಯ ನಿರ್ವಹಿಸಲು ಸಕ್ಷಮರಾಗಿರತಕ್ಕದ್ದು.

(2) (1) ನೇ ಉಪ ಪ್ರಕರಣದ ಮೇರೆಗೆ ಅಧಿಕೃತರಾದ ಪ್ರತಿಯೊಬ್ಬ ಅಧಿಕಾರಿಯನ್ನು, ಭಾರತ ದಂಡ ಸಂಹಿತೆಯ (1860 ರ ಕೇಂದ್ರ ಅಧಿನಿಯಮ XLV) 21 ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಒಬ್ಬ ಸರ್ಕಾರಿ ನೌಕರ ಎಂದು ಪರಿಗಣಿಸತಕ್ಕದ್ದು.

**4. ಆಸ್ಪತ್ರೆ, ಕಾರಾಗೃಹ ಮತ್ತು ಸಾರ್ವಜನಿಕ ಸ್ಥಳಗಳಲ್ಲಿನ ಹಕ್ಕು ಸಾಧಿಸದ ಮೃತ ದೇಹಗಳಿಗೆ ಸಂಬಂಧಿಸಿದಂತೆ ವ್ಯವಹರಿಸುವ ಬಗೆ.–** (1) ಒಬ್ಬ ವ್ಯಕ್ತಿಯು ಆಸ್ಪತ್ರೆ ಅಥವಾ ಕಾರಾಗೃಹದಲ್ಲಿ ಮೃತನಾದರೆ ಮತ್ತು ನಿಯಮಿಸಲಾದ ಅವಧಿಯೊಳಗಾಗಿ ಆ ವ್ಯಕ್ತಿಯ ದೇಹವನ್ನು ಯಾರೇ ಹಿತಾಸಕ್ತ ವ್ಯಕ್ತಿಯು ಹಕ್ಕು ಸಾಧಿಸದಿದ್ದರೆ, ಅಂಥ ಆಸ್ಪತ್ರೆ ಅಥವಾ ಕಾರಾಗೃಹದ ಪ್ರಭಾರದಲ್ಲಿರುವ ಅಧಿಕಾರಿ ಅಥವಾ ಯಾರೇ ಪೊಲೀಸ್ ಅಧಿಕಾರಿಯು, ಸಾಧ್ಯವಾದಷ್ಟೂ ವಿಳಂಬ ಮಾಡದೆ ಅಧಿಕೃತ ಅಧಿಕಾರಿಗೆ ವಿಷಯವನ್ನು ವರದಿ ಮಾಡತಕ್ಕದ್ದು ಮತ್ತು ಸದರಿ ಅಧಿಕಾರಿಯು, ಹಕ್ಕು ಸಾಧಿಸದ ದೇಹವನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು (3) ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಸಂದರ್ಭವನ್ನು ಹೊರತುಪಡಿಸಿ, ಅಂಗೀಕೃತ ಸಂಸ್ಥೆಯ ಪ್ರಭಾರದಲ್ಲಿನ ಅಧಿಕಾರಿಗೆ, ಆ ಪ್ರಾಧಿಕಾರಿಯು, ಆ ದೇಹವನ್ನು ಶರೀರ ರಚನಾ ಪರೀಕ್ಷೆಗೆ ಒಳಪಡಿಸಲು ಮತ್ತು ಅದನ್ನು ಕೊಯ್ದು ಪರೀಕ್ಷೆ ಮಾಡಲು ಅಥವಾ ಅಂಥದೇ ಇತರೆ ಉದ್ದೇಶಕ್ಕಾಗಿ ಉಪಯೋಗಿಸಲು ಅಗತ್ಯವೆಂದು ಕೇಳಿದರೆ ಅದನ್ನು ಅವರ ವಶಕ್ಕೆ ಒಪ್ಪಿಸತಕ್ಕದ್ದು.

(2) ಯಾವುದೇ ಖಾಯಂ ವಾಸಸ್ಥಳ ಅಥವಾ ನಿವಾಸವು ಇರದ ಯಾರೇ ವ್ಯಕ್ತಿಯು ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಮೃತನಾದರೆ ಮತ್ತು ನಿಯಮಿಸಲಾದ ಅವಧಿಯೊಳಗಾಗಿ ಆ ವ್ಯಕ್ತಿಯ ದೇಹವನ್ನು ಯಾರೇ ಹಿತಾಸಕ್ತ ವ್ಯಕ್ತಿಯು ಹಕ್ಕು ಸಾಧಿಸದಿದ್ದರೆ, ಅಧಿಕೃತ ಅಧಿಕಾರಿಯು, ಹಕ್ಕು ಸಾಧಿಸದ ಅಂಥ ದೇಹವನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು (3) ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಸಂದರ್ಭವನ್ನು ಹೊರತುಪಡಿಸಿ, ಅಂಗೀಕೃತ ಸಂಸ್ಥೆಯ ಪ್ರಭಾರದಲ್ಲಿರುವ ಅಧಿಕಾರಿಗೆ, ಆ ಅಧಿಕಾರಿಯು (1) ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಉದ್ದೇಶಗಳಿಗಾಗಿ ಅಗತ್ಯವೆಂದು ಕೇಳಿದರೆ ಅದನ್ನು ಅವನ ವಶಕ್ಕೆ ಒಪ್ಪಿಸತಕ್ಕದ್ದು.

(3) ಮರಣದ ಕಾರಣದ ಬಗ್ಗೆ ಯಾವುದೇ ಸಂದೇಹವಿದ್ದರೆ ಅಥವಾ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ, 1898ರ (1898ರ ಕೇಂದ್ರ ಅಧಿನಿಯಮ V) 174 ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಪೊಲೀಸ್ ಅಧಿಕಾರಿಯ

ವಶಕ್ಕೆ ಹಕ್ಕು ಸಾಧಿಸದ ದೇಹವನ್ನು ಒಪ್ಪಿಸುವುದು ಸೂಕ್ತವೆಂದು ಅಧಿಕೃತ ಅಧಿಕಾರಿಯು ಪರಿಗಣಿಸಿದರೆ, ಅವನು ಹಾಗೆ ಮಾಡಬಹುದು.

(4) ಈ ಪ್ರಕರಣದ ಮೇರೆಗೆ ಅಧಿಕೃತ ಅಧಿಕಾರಿಯು ಸ್ವಾಧೀನಕ್ಕೆ ತೆಗೆದುಕೊಂಡ ಹಕ್ಕು ಸಾಧಿಸದ ಯಾವುದೇ ದೇಹವನ್ನು (1) ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಉದ್ದೇಶಕ್ಕಾಗಿ ಅಂಗೀಕೃತ ಸಂಸ್ಥೆಯ ಪ್ರಭಾರದಲ್ಲಿರುವ ಅಧಿಕಾರಿಯು ಅಗತ್ಯವೆಂದು ಕೇಳದಿದ್ದರೆ, ಅದನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ವಿಲೇ ಮಾಡತಕ್ಕದ್ದು.

[1][4ಎ. **ಶಾರೀರಿಕ ಪರೀಕ್ಷೆ – ಇತ್ಯಾದಿಗಳಿಗಾಗಿ ಮೃತ ವ್ಯಕ್ತಿಗಳ ದೇಹಗಳ ಅಥವಾ ಅವುಗಳ ಯಾವುದೇ ಭಾಗವನ್ನು ದಾನ ಮಾಡುವುದು.–** (1) ಯಾರೇ ವ್ಯಕ್ತಿಯು ತನ್ನ ಮರಣಕ್ಕೆ ಮುಂಚೆ, ಯಾವುದೇ ಸಮಯದಲ್ಲಿ, ತನ್ನ ಮರಣದ ನಂತರ ತನ್ನ ದೇಹ ಅಥವಾ ಅದರ ಯಾವುದೇ ಭಾಗವನ್ನು ಶಾರೀರಿಕ ಪರೀಕ್ಷೆ ಮಾಡಲು ಮತ್ತು ಅದನ್ನು ಕೊಯ್ದು ಪರೀಕ್ಷಿಸಲು ಅಥವಾ ಅಂಥದೇ ಇತರ ಉದ್ದೇಶಕ್ಕಾಗಿ ಅಂಗೀಕೃತ ಸಂಸ್ಥೆಗೆ ನೀಡಬೇಕೆಂದು ಇಬ್ಬರು ಅಥವಾ ಹೆಚ್ಚಿನ ಸಾಕ್ಷಿದಾರರ ಸಮ್ಮುಖದಲ್ಲಿ ತನ್ನ ಇಂಗಿತವನ್ನು ಲಿಖಿತದಲ್ಲಿ ವ್ಯಕ್ತಪಡಿಸಿದ್ದರೆ, ಯಾರೇ ಹಿತಾಸಕ್ತ ವ್ಯಕ್ತಿಯು ಸದರಿ ಇಂಗಿತವನ್ನು ತದನಂತರ ರದ್ದುಗೊಳಿಸಲಾಗಿದೆಯೆಂದು ನಂಬಲು ಕಾರಣವಿದ್ದ ಹೊರತು, ಮೃತನ ಇಂಗಿತಕ್ಕೆ ಅನುಸಾರವಾಗಿ ಯಾವುದೇ ಅಂಗೀಕೃತ ಸಂಸ್ಥೆಗೆ ಮೃತದೇಹ ಅಥವಾ ಅದರ ಅಂಥ ಯಾವುದೇ ಭಾಗವನ್ನು ಬಳಸುವುದಕ್ಕಾಗಿ ಕೊಂಡೊಯ್ಯಲು ಅಧಿಕಾರ ನೀಡಬಹುದು.

(2) (1) ನೇ ಉಪ ಪ್ರಕರಣದ ಉಪಬಂಧಗಳಿಗೆ ಪ್ರತಿಕೂಲವಾಗದಂತೆ,–

(ಎ) ಮೃತನು, ತನ್ನ ಮರಣದ ನಂತರ ತನ್ನ ದೇಹ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ವ್ಯವಹರಿಸಲು ತನ್ನ ಆಕ್ಷೇಪಣೆಯನ್ನು ವ್ಯಕ್ತಪಡಿಸಿದ್ದನೆಂದು ಮತ್ತು ಅಂಥ ಆಕ್ಷೇಪಣೆಯನ್ನು ಹಿಂದಕ್ಕೆ ಪಡೆದಿಲ್ಲವೆಂದು; ಅಥವಾ

(ಬಿ) (2)ನೇ ಪ್ರಕರಣದ (ಡಿ) ಖಂಡದಲ್ಲಿ ಉಲ್ಲೇಖಿಸಲಾದ, ಮೃತನ ಹತ್ತಿರದ ಯಾರೇ ಸಂಬಂಧಿಯು ಆ ದೇಹದ ಬಗ್ಗೆ ಹಾಗೆ ವ್ಯವಹರಿಸುವ ಬಗ್ಗೆ ಆಕ್ಷೇಪಣೆ ಎತ್ತಿಲ್ಲವೆಂದು

– ನಂಬಲು ಕಾರಣವಿದ್ದ ಹೊರತು, ಅಂಥ ಹಿತಾಸಕ್ತ ವ್ಯಕ್ತಿಯು (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಉದ್ದೇಶಗಳಿಗಾಗಿ ಇಡೀ ದೇಹವನ್ನು ಅಥವಾ ದೇಹದ ಯಾವುದೇ ಭಾಗವನ್ನು ಕೊಂಡ್ಯೊಯ್ಯಲು ಅಧಿಕಾರ ನೀಡಬಹುದು.

(3) (4) ಮತ್ತು (5) ನೇ ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು, ಈ ಪ್ರಕರಣಕ್ಕನುಸಾರವಾಗಿ ನೀಡಲಾದ ಅಧಿಕಾರದೊಂದಿಗೆ ಇಡೀ ದೇಹ ಅಥವಾ ಅದರ ಯಾವುದೇ ಭಾಗವನ್ನು ಕೊಂಡೊಯ್ಯುವುದು ಮತ್ತು ಬಳಸುವುದು ಕಾನೂನು ಸಮ್ಮತವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ದೇಹ ಅಥವಾ ಅದರ ಯಾವುದೇ ಭಾಗವನ್ನು ಕೊಂಡೊಯ್ಯುವುದಕ್ಕೆ ಸಾಕಷ್ಟು ಸಮರ್ಥನೆಯಿರತಕ್ಕದ್ದು.

(4) ಯಾರೇ ಮೃತ ವ್ಯಕ್ತಿಯ ದೇಹ ಅಥವಾ ಅದರ ಯಾವುದೇ ಭಾಗವನ್ನು,–

(i) ಅಂಥ ವ್ಯಕ್ತಿಯ ಮರಣದ ಸಮಯದಿಂದ ನಲವತ್ತೆಂಟು ಘಂಟೆಗಳೊಳಗೆ; ಅಥವಾ

(ii) ಆ ದೇಹವನ್ನು ಕೊಂಡೊಯ್ಯುವ ಉದ್ದೇಶದ ಬಗ್ಗೆ ಕಾರ್ಯ ನಿರ್ವಾಹಕ ದಂಡಾಧಿಕಾರಿ ನೋಟೀಸು ನೀಡಿದ ನಂತರ ಇಪ್ಪತ್ನಾಲ್ಕು ಘಂಟೆಗಳಾಗುವವರೆಗೆ (ಅಂಥ ಮರಣದ ಸಮಯದಿಂದ ಲೆಕ್ಕ ಹಾಕಬೇಕು); ಅಥವಾ

(iii) ದೇಹವನ್ನು ಕೊಂಡೊಯ್ಯುವ ಮೊದಲು, ಕಾಯಿಲೆಯಿಂದಾಗಿ ಮೃತಪಟ್ಟ ಅಂಥ ವ್ಯಕ್ತಿಯ ಚಿಕಿತ್ಸೆ ನೀಡಿದ ನೋಂದಾಯಿತ ವೈದ್ಯನು ಸಹಿ ಮಾಡಿ, ಅಂಥ ವ್ಯಕ್ತಿಯು ಹೇಗೆ ಮೃತಪಟ್ಟನೆಂದು ತಿಳಿಸುವ ಅಥವಾ ಅಂಥ ಕಾಯಿಲೆಯ ಅವಧಿಯಲ್ಲಿ ಯಾರೇ ಅಂಥ ವೈದ್ಯನು ಅಂಥ ವ್ಯಕ್ತಿಗೆ ಚಿಕಿತ್ಸೆ ನೀಡಿಲ್ಲದಿದ್ದರೆ, ಆಗ ಅಂಥ ವ್ಯಕ್ತಿಯು ಮೃತನಾದ ತರುವಾಯ, ಅವನ ದೇಹವನ್ನು ಪರೀಕ್ಷಿಸಲು ನೋಂದಾಯಿತ ವೈದ್ಯನನ್ನು ಕರೆಸತಕ್ಕದ್ದು. ಆದರೆ, ಮೇಲ್ಕಂಡಂತೆ ದೇಹವನ್ನು ಕೊಂಡೊಯ್ಯುವ ಉದ್ದೇಶವನ್ನು ಈಡೇರಿಸುವುದು ಅವನಿಗೆ ಸಂಬಂಧಪಡತಕ್ಕದ್ದಲ್ಲ. ಅವನು ತನ್ನ ತಿಳಿವಳಿಕೆ ಮತ್ತು ನಂಬುವಷ್ಟರ ಮಟ್ಟಿಗೆ ಮರಣ ಸಂಭವಿಸಿದ ರೀತಿ ಮತ್ತು ಕಾರಣವನ್ನು ತಿಳಿಸುವ ಪ್ರಮಾಣಪತ್ರವಿದ್ದ ಹೊರತು

– ಅಂಥ ವ್ಯಕ್ತಿಯು ಮೃತಪಟ್ಟ ಯಾವುದೇ ಸ್ಥಳದಿಂದ (1) ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಉದ್ದೇಶಗಳಿಗಾಗಿ ಕೊಂಡೊಯ್ಯತಕ್ಕದ್ದಲ್ಲ.

ಮತ್ತು, ಕೊಂಡೊಯ್ಯುವಂಥ ಸಂದರ್ಭದಲ್ಲಿ ಮೇಲೆ ಹೇಳಿದ ಯಾವುವೇ ಉದ್ದೇಶಗಳಿಗಾಗಿ ಅದನ್ನು ಸ್ವೀಕರಿಸುವ ಅಂಗೀಕೃತ ಸಂಸ್ಥೆಯ ಪ್ರಭಾರದಲ್ಲಿರುವ ಅಧಿಕಾರಿಗೆ ಆ ದೇಹದ ಜೊತೆಯಲ್ಲಿ ಅಂಥ ಪ್ರಮಾಣ ಪತ್ರವನ್ನು ಕಳುಹಿಸತಕ್ಕದ್ದು.

(5) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗನುಸಾರವಾಗಿ, ಅಂಥ ದೇಹದ ಪಂಚನಾಮೆ ಅಥವಾ ಮರಣೋತ್ತರ ಶವ ಪರೀಕ್ಷೆಯ ಅಗತ್ಯವಿದೆಯೆಂದು ಹಿತಾಸಕ್ತ ವ್ಯಕ್ತಿಗೆ ನಂಬಲು ಕಾರಣವಿದ್ದರೆ, ಆ ದೇಹ ಅಥವಾ ಅದರ ಯಾವುದೇ ಭಾಗವನ್ನು ಕೊಂಡೊಯ್ಯುವ ಅಧಿಕಾರಿಯು, ಅಂಥ ಕಾನೂನಿನ ಮೇರೆಗೆ ಪಂಚನಾಮೆ ನಡೆಸಲು ಅಥವಾ ಮರಣೋತ್ತರ ಶವಪರೀಕ್ಷೆ ಮಾಡಲು ಅಧಿಕೃತ ಅಧಿಕಾರಿಯ ಸಮ್ಮತಿಯಿದ್ದ ಹೊರತು, ಈ ಪ್ರಕರಣದ ಮೇರೆಗೆ ಆ ದೇಹವನ್ನು ಅಥವಾ ಅದರ ಯಾವುದೇ ಭಾಗವನ್ನು ನೀಡತಕ್ಕದ್ದಲ್ಲ][1].

1. 1999ರ ಅಧಿನಿಯಮ 15ರ ಮೂಲಕ 1.8.2001 ರಿಂದ ಜಾರಿಗೆ ಬರುವಂತೆ ಅಧಿಸೂಚನೆ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಪುಟದಲ್ಲಿದೆ.

**5. ಹತ್ತಿರದ ಸಂಬಂಧಿಗಳು ಯಾರು ಎಂಬ ಬಗ್ಗೆ ಉಂಟಾಗುವ ಸಂದೇಹ ಅಥವಾ ವಿವಾದಗಳನ್ನು [1][XXX][1] ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗೆ ವಹಿಸುವುದು.–** (1) 4ನೇ ಪ್ರಕರಣದ ಉದ್ದೇಶಕ್ಕೆ ಸಂಬಂಧಿಸಿದಂತೆ ಯಾರೇ ವ್ಯಕ್ತಿಯು ಹಿತಾಸಕ್ತ ವ್ಯಕ್ತಿಯೇ, ಅಲ್ಲವೇ ಎಂಬ ಬಗ್ಗೆ ಯಾವುದೇ ಸಂದೇಹ ಅಥವಾ ವಿವಾದ ಉಂಟಾದರೆ, ಆ ವಿಷಯವನ್ನು [1][XXX][1] ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗೆ ವಹಿಸತಕ್ಕದ್ದು ಅಂಥ ನ್ಯಾಯಿಕ ದಂಡಾಧಿಕಾರಿಯ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಅಂಥ ತೀರ್ಮಾನವು ಇತ್ಯರ್ಥದಲ್ಲಿರುವಾಗ, ಮೃತ ವ್ಯಕ್ತಿಯ ದೇಹವನ್ನು ಗೊತ್ತುಪಡಿಸ ಬಹುದಾದಂಥ ರೀತಿಯಲ್ಲಿ ಕೆಡದಂತೆ ಸಂರಕ್ಷಿಸಿಡತಕ್ಕದ್ದು.

**6. ದಂಡನೆ.–** ಈ ಅಧಿನಿಯಮದ ಮೂಲಕ ಉಪಬಂಧಿಸಿರುವುದನ್ನುಳಿದು, ಹಕ್ಕು ಸಾಧಿಸದ ದೇಹವನ್ನು ವಿಲೆ ಮಾಡುವ ಅಥವಾ ವಿಲೆಗೆ ದುಷ್ಪ್ರೇರಣೆ ನೀಡುವ (4) ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಉದ್ದೇಶಗಳಿಗಾಗಿ ಅಂಥ ಮೃತ ದೇಹವನ್ನು ಅಂಗೀಕೃತ ಸಂಸ್ಥೆಯ ಪ್ರಭಾರದಲ್ಲಿರುವ ಯಾರೇ ಅಧಿಕಾರಿ ಅಥವಾ ಅಧಿಕೃತ ಅಧಿಕಾರಿಗೆ ಒಪ್ಪಿಸಲು, ಸ್ವಾಧೀನಕ್ಕೆ ಕೊಡಲು, ಕೊಂಡೊಯ್ಯಲು, ಬಳಸಲು ಅಡ್ಡಿಪಡಿಸುವ ಯಾರೇ ವ್ಯಕ್ತಿಯು ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ದಂಡಿತನಾಗತಕ್ಕದ್ದು.

**7. ಹಕ್ಕು ಸಾಧಿಸದ ದೇಹಗಳನ್ನು ಸ್ವಾಧೀನಪಡಿಸಿಕೊಳ್ಳುವಲ್ಲಿ ನೆರವು ನೀಡುವುದು ಪೊಲೀಸ್ ಮತ್ತು ಇತರ ಅಧಿಕಾರಿಗಳ ಕರ್ತವ್ಯ.–** ಪೊಲೀಸು, ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಇಲಾಖೆಗಳ ಎಲ್ಲಾ ಅಧಿಕಾರಿಗಳು ಮತ್ತು ನೌಕರರು, ಸ್ಥಳೀಯ ಪ್ರಾಧಿಕಾರದ ಸೇವೆಯಲ್ಲಿರುವ ಎಲ್ಲ ಅಧಿಕಾರಿಗಳು ಮತ್ತು ನೌಕರರು ಮತ್ತು ಎಲ್ಲ ಗ್ರಾಮಾಧಿಕಾರಿಗಳು ಮತ್ತು ನೌಕರರು, ಈ ಅಧಿನಿಯಮದ ಅಡಿಯಲ್ಲಿ ಅಧಿಕೃತ ಅಧಿಕಾರಿಗಳ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಅವರಿಗೆ ನೆರವಾಗಲು ಎಲ್ಲ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಬದ್ಧರಾಗಿರತಕ್ಕದ್ದು.

**8. ಈ ಅಧಿನಿಯಮದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ರಕ್ಷಣೆ.–** ಈ ಅಧಿನಿಯಮದ ಅನುಸರಣೆಯಲ್ಲಿ ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಬೇಕೆಂದು ಉದ್ದೇಶಿಸಲಾದ ಯಾವುದೇ ಕ್ರಮಕ್ಕೆ ಸಂಬಂಧಿಸಿದಂತೆ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಕ್ರಮ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**9. ನಿಯಮ ರಚನಾಧಿಕಾರ.–** ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ನಿಯಮಗಳನ್ನು ರಚಿಸಬಹುದು.

**10. ನಿರಸನ.–** ಬಳ್ಳಾರಿ ಜಿಲ್ಲೆ ಮತ್ತು [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮದ್ರಾಸು ಶರೀರ ರಚನಾ ಶಾಸ್ತ್ರ ಅಧಿನಿಯಮ, 1951 (1951ರ ಮದ್ರಾಸು ಅಧಿನಿಯಮ XVIII) ಮತ್ತು [1][ಬೆಳಗಾಂ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಬಾಂಬೆ ಶರೀರ ರಚನಾ ಶಾಸ್ತ್ರ ಅಧಿನಿಯಮ, 1949 (1949ರ ಬಾಂಬೆ ಅಧಿನಿಯಮ XI) ಮತ್ತು [1][ಗುಲ್ಬರ್ಗಾ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಹೈದರಾಬಾದ್ ರೋಗಲಕ್ಷಣ ಶಾಸ್ತ್ರ ಮತ್ತು ಶರೀರ ರಚನಾ ಶಾಸ್ತ್ರ ಅಧಿನಿಯಮ, 1955 (1955ರ ಹೈದರಾಬಾದ್ ಅಧಿನಿಯಮ X) ನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಆದರೆ, ಸದರಿ ಅಧಿನಿಯಮಗಳ ಅಡಿಯಲ್ಲಿ ಕೈಗೊಂಡ ಯಾವುದೇ ಕಾರ್ಯಾಚರಣೆ ಅಥವಾ ಯಾವುದೇ ಕ್ರಮವನ್ನು (ಮಾಡಲಾದ ಯಾವುದೇ ನೇಮಕಾತಿ ಅಥವಾ ರಚಿಸಲಾದ ನಿಯಮಗಳು, ಹೊರಡಿಸಲಾದ ಅಧಿಸೂಚನೆ, ಆದೇಶ ಅಥವಾ ನಿರ್ದೇಶನವೂ ಸೇರಿದಂತೆ) ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ಮಾಡಲಾದುದು ಅಥವಾ ಕೈಗೊಳ್ಳಲಾದುದು ಎಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಅಡಿಯಲ್ಲಿ ಕೈಗೊಂಡ ಯಾವುದೇ ಕಾರ್ಯಾಚರಣೆ ಅಥವಾ ಯಾವುದೇ ಕ್ರಮವನ್ನು ರದ್ದುಪಡಿಸಿದ ಹೊರತು ಅಥವಾ ಆವರೆಗೆ ಅದಕ್ಕನುಸಾರವಾಗಿ ಜಾರಿಯಲ್ಲಿ ಮುಂದುವರಿಯತಕ್ಕದ್ದು.

** ** **

## ಅಧಿಸೂಚನೆಗಳು

### I

**ಬೆಂಗಳೂರು, ದಿನಾಂಕ 1 ನೇ ಸೆಪ್ಟೆಂಬರ್ 1958 [ಸಂ. ಎಲ್‌ಎಲ್‌ಎಚ್ 12 ಎಂಡಿಆರ್ 58]**

ಮೈಸೂರು ಶರೀರ ರಚನಾ ಶಾಸ್ತ್ರ ಅಧಿನಿಯಮ, 1957 ರ (1957ರ ಮೈಸೂರು ಅಧಿನಿಯಮ ಸಂಖ್ಯೆ 23) 1 ನೇ ಪ್ರಕರಣದ (3) ನೇ ಉಪಪ್ರಕರಣದ ಮೂಲಕ ನೀಡಲಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1958ರ ಸೆಪ್ಟೆಂಬರ್ 4ನೇ ದಿನಾಂಕವು, ಸದರಿ ಅಧಿನಿಯಮವು ಮೈಸೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಎಂ ವಾಸುದೇವರಾವ್**
ಸರ್ಕಾರದ ಕಾರ್ಯದರ್ಶಿ,
ಸ್ಥಳೀಯ ಸ್ವಯಂ ಆಡಳಿತ ಸರ್ಕಾರ ಮತ್ತು
ಸಾರ್ವಜನಿಕ ಆರೋಗ್ಯ ಇಲಾಖೆ.

(ದಿನಾಂಕ 4.9.1958ರ ಪುಟ 591 ರಲ್ಲಿ ರಾಜ್ಯಪತ್ರದ ಭಾಗ **IV**–2–ಸಿ ಯಲ್ಲಿ ಪ್ರಕಟವಾಗಿದೆ)

### II

**ಬೆಂಗಳೂರು, ದಿನಾಂಕ 30 ನೇ ಮೇ 1961 [ಸಂ.ಪಿಎಲ್‌ಎಂ 167 ಎಂಡಿಎ 60]**

ಮೈಸೂರು ಶರೀರ ರಚನಾ ಶಾಸ್ತ್ರ ಅಧಿನಿಯಮ, 1957ರ (1957ರ ಮೈಸೂರು ಅಧಿನಿಯಮ ಸಂ 23) 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ನೀಡಲಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1961ರ ಜೂನ್ 1 ನೇ ದಿನಾಂಕವು ಈ ಮುಂದಿನ ಜಿಲ್ಲೆಗಳಲ್ಲಿ ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ, ಎಂದರೆ :–

1. ಗುಲ್ಬರ್ಗಾ ಮತ್ತು
2. ಬೀದರ್.

ಮೈಸೂರು ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಒ.ವಿ. ರಾಮಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ ಎಚ್ ಕಾರ್ಮಿಕ ಮತ್ತು ಪೌರಾಡಳಿತ ಇಲಾಖೆ.

(ದಿನಾಂಕ 4.9.1958ರ ಪುಟ 591 ರಲ್ಲಿ ರಾಜ್ಯಪತ್ರದ ಭಾಗ –**IV**–2 ಸಿ ಯಲ್ಲಿ ಪ್ರಕಟವಾಗಿದೆ)

### III

**ಬೆಂಗಳೂರು ದಿನಾಂಕ 13 ನೇ ಜುಲೈ 1960**
**(ಆಷಾಢ 22 ಶಕ ವರ್ಷ 1882) [ಸಂ. ಎಲ್‌ಎಲ್‌ಎಚ್ 23 ಎಂಡಿಎ 60]**

ಮೈಸೂರು ಶರೀರ ರಚನಾ ಶಾಸ್ತ್ರ ಅಧಿನಿಯಮ, 1957 ರ (1957ರ ಮೈಸೂರು ಅಧಿನಿಯಮ 23) 1 ನೇ ಪ್ರಕರಣದ (3) ನೇ ಉಪಪ್ರಕರಣದ ಮೂಲಕ ನೀಡಲಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1960ರ ಆಗಸ್ಟ್ 2 ನೇ ದಿನಾಂಕವು ಸದರಿ ಅಧಿನಿಯಮವು ಈ ಮುಂದಿನ ಜಿಲ್ಲೆಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ, ಎಂದರೆ:–

1. ಬೆಂಗಳೂರು
2. ಕೂರ್ಗ್
3. ಹಾಸನ
4. ಮಂಡ್ಯ
5. ಚಿಕ್ಕಮಗಳೂರು
6. ಚಿತ್ರದುರ್ಗ
7. ತುಮಕೂರು
8. ಕೋಲಾರ
9. ಶಿವಮೊಗ್ಗ
10. ರಾಯಚೂರು.

ಮೈಸೂರು ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಎಂ. ಚಿನ್ನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಎಲ್.ಎಸ್.ಜಿ ಮತ್ತು ಪಿ.ಎಚ್ ಇಲಾಖೆ.

**IV**

**ಬೆಂಗಳೂರು ದಿನಾಂಕ 11 ನೇ ಜುಲೈ 2000 [ಸಂಖ್ಯೆ . ಎಚ್‌ಇಡಬ್ಲ್ಯೂ 189 ಪಿಟಿಡಿ 99]**

ಕರ್ನಾಟಕ ಶರೀರ ರಚನಾ ಶಾಸ್ತ್ರ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ ಸಂಖ್ಯೆ 23) 1 ನೇ ಪ್ರಕರಣದ (3) ನೇ ಉಪಪ್ರಕರಣದ ಮೂಲಕ ನೀಡಲಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2000 ದ ಜುಲೈ ಹನ್ನೊಂದನೇ ದಿನಾಂಕವು ಸದರಿ ಅಧಿನಿಯಮವು ರಾಜ್ಯದಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಜೆ. ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**V**

**ಬೆಂಗಳೂರು ದಿನಾಂಕ 28 ನೇ ಜುಲೈ 2001 [ಸಂ.ಎಚ್‌ಎಫ್‌ಡಬ್ಲ್ಯೂ 189 ಪಿಟಿಡಿ 99]**

ಕರ್ನಾಟಕ ಶರೀರ ರಚನಾ ಶಾಸ್ತ್ರ (ತಿದ್ದುಪಡಿ) ಅಧಿನಿಯಮ, 1999 ರ (1999ರ ಕರ್ನಾಟಕ ಅಧಿನಿಯಮ 15) 1 ನೇ ಪ್ರಕರಣದ (2) ನೇ ಉಪ ಪ್ರಕರಣದ ಮೂಲಕ ನೀಡಲಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2001 ರ ಆಗಸ್ಟ್ ಒಂದನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಜೆ. ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

The above translation of the Karnataka Anatomy Act, 1957 (Karnataka Act 23 of 1957) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 974

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 28 ಎಂಎಲ್‌ಆರ್ 2006 (ಎ–9), ಬೆಂಗಳೂರು, ದಿನಾಂಕ: 18ನೇ ಮೇ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬಾಗಲಕೋಟೆ ನಗರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಪ್ರಕಾಶ್ ಬರಗಿ, ಸಾ: ಬಾಗಲಕೋಟೆ
2. ಶ್ರೀ ಅಬ್ದುಲ್ ಜಬ್ಬಾರ ಹುಸೇನಸಾಬ್ ಸೋಲಾಪೂರಕರ್, ಸಾ: ಬಾಗಲಕೋಟೆ
3. ಶ್ರೀ ದುಂಡಪ್ಪ ಎಳಮ್ಮಿ, ಸಾ: ಬಾಗಲಕೋಟೆ
4. ಶ್ರೀ ಜೆ.ಬಿ. ದೇವದಾಸ್, ಸಾ: ಬಾಗಲಕೋಟೆ
5. ಶ್ರೀ ಜಗದೀಶ್ ಬಳೂಲಮಠ, ಸಾ: ಬಾಗಲಕೋಟೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಪಿ.ಆರ್. 985 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ನಅಇ 28 ಎಂಎಲ್‌ಆರ್ 2006 (ಬಿ–13), ಬೆಂಗಳೂರು, ದಿನಾಂಕ: 17ನೇ ಮೇ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಮದುರ್ಗ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಬಾಲಕೃಷ್ಣ ರಾಮಚಂದ್ರ ಕುಲಕರ್ಣಿ, ರಾಮದುರ್ಗ
2. ಶ್ರೀ ಮಹಾಂತೇಶ ಮಂಡಪ್ಪ ಬೆಂಬಳಗಿ, ರಾಮದುರ್ಗ
3. ಶ್ರೀ ಈರಪ್ಪ ಫ ಕೊಳಚಿ, ರಾಮದುರ್ಗ
4. ಶ್ರೀ ಅಶೋಕ ಕಡಕೋಳ, ರಾಮದುರ್ಗ
5. ಶ್ರೀ ಮುಸಾಅಲಿ ಕಮನ್‌ಸಾಬ್ ಶೇಖ, ರಾಮದುರ್ಗ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಪಿ.ಆರ್. 986 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ನಅಇ 28 ಎಂಎಲ್‌ಆರ್ 2006 (ಬಿ–16), ಬೆಂಗಳೂರು, ದಿನಾಂಕ: 18ನೇ ಮೇ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬೈಲಹೊಂಗಲ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಗುರುಶಿದ್ದಪ್ಪ ಪರಪ್ಪ, ಮೆಟಗುಡ್ಡ, ಸಾ: ಬೈಲಹೊಂಗಲ
2. ಶ್ರೀ ಮಲ್ಲೇಶಪ್ಪ ರುದ್ರಪ್ಪ ಬೋಳಣ್ಣವರ, ಸಾ: ಬೈಲಹೊಂಗಲ
3. ಶ್ರೀ ಮಹಾಂತೇಶ ದುಂಡಪ್ಪ ಮರಬದ, ಸಾ: ಬೈಲಹೊಂಗಲ
4. ಶ್ರೀಮತಿ ನಾಗರತ್ನಾ ಅಣ್ಣಪ್ಪ ಬಾಳಿ, ಸಾ: ಬೈಲಹೊಂಗಲ
5. ಶ್ರೀ ಪರಶುರಾಮ ಯಲ್ಲಪ್ಪ ರಾಯಭಾಗ, ಸಾ: ಬೈಲಹೊಂಗಲ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಪಿ.ಆರ್. 987 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ನಅಇ 28 ಎಂಎಲ್‌ಆರ್ 2006 (ಬಿ–17), ಬೆಂಗಳೂರು, ದಿನಾಂಕ: 18ನೇ ಮೇ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಿಂಧಗಿ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಶಂಕ್ರೆಪ್ಪ ಹುಚ್ಚಪ್ಪ ಮಡ್ನಳ್ಳಿ, ಸಿಂಧಗಿ
2. ಶ್ರೀ ಬಸವಂತಪ್ಪ ಮರಗಪ್ಪ ಲಿಂಗದಳ್ಳಿ, ಸಿಂಧಗಿ
3. ಶ್ರೀ ಚಂದ್ರಶೇಖರ ಮಲ್ಯಾಳ, ಸಿಂಧಗಿ
4. ಶ್ರೀ ತಮ್ಮಣ್ಣ ಈರಪ್ಪ ಈಳಗೇರ, ಸಿಂಧಗಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಪಿ.ಆರ್. 988 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ನಅಇ 28 ಎಂಎಲ್ಆರ್ 2006 (ಸಿ–6), ಬೆಂಗಳೂರು, ದಿನಾಂಕ: 18ನೇ ಮೇ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿರೇಕೆರೂರು ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಗುರುಶಾಂತ ಬಸವರಾಜಪ್ಪ ಯತ್ತಿನಹಳ್ಳಿ, ಸಾ: ಹಿರೇಕೆರೂರು
2. ಶ್ರೀ ಜಬೀ ಅಹ್ಮದ ಮರ್ದಾನಸಾಬ ಲೋಹಾರ್, ಸಾ: ಹಿರೇಕೆರೂರು
3. ಶ್ರೀ ಹೊನ್ನಪ್ಪ ಕರಿಯಪ್ಪ ಸಾಲಿ, ಸಾ: ಹಿರೇಕೆರೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಜಿ. ವಾಲಿ**
ಪಿ.ಆರ್. 989 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**URBAN DEVELOPMENT SECRETARIAT**
**NOTIFICATION**
**No: UDD 108 BMR 2006, Bangalore, Dated: 23rd May 2006**

WHEREAS the Board of Directors of Bangalore Metro Rail Corporation Limited (BMRCL) was last constituted on 14.11.2002.

And whereas there has been a change in the incumbency of Director.

NOW, therefore Government in exercise of the powers conferred under Article 56(a), 59 and 60 of the Articles of Association, reconstitute the Board of Directors of Bangalore Metro Rail Corporation Limited as follows:-

| | |
|---|---|
| Sri K. Jairaj,<br>Commissioner, Bangalore Mahanagara Palike,<br>(in place of Sri Jothiramalingam) | Director |

By Order and in the Name of the Governor of Karnataka,
**V.R. ILKAL**
PR-983 Under Secretary to Government,
Urban Development Department.

**LAW, JUSTICE AND HUMAN RIGHTS SECRETARIAT**
**NOTIFICATION**
**No: LAW 32 LAC 2006, Bangalore, Dated: 12th May 2006**

In exercise of the powers conferred by Article 234 of the Constitution of India and in pursuance of the directions issued by Karnataka Administrative Tribunal in its Order dated 08.06.2005 in application Nos.976, 977, 978 and 979 of 2005 and the recommendation made by the Hon'ble High Court of Karnataka vide its letter No. GOB-I/260/1999 dated: 3.2.2006. His Excellency the Governor of Karnataka is pleased to appoint the following persons, selected under the Karnataka Judicial Services (Recruitment) Rules, 1983 and Karnataka Civil Service (Absorption of Persons appointed to the State Civil Services with the benefit of Rural Weightage) (Special) Rules 2003 as Civil Judges (Junior Division) in the Karnataka Judicial Services with immediate effect.

1. Sri Pruthviraj Vernekar, Asst. Public Prosecutor, Addl. JMFC, Sirsi.
2. Sri K. Mahadeva, Advocate, Hebya village, Someswarapura post, Via Kadakola Nanjanagud Taluk, Mysore District.

By Order and in the Name of the Governor of Karnataka,
**GANGANARASAIAH**
PR-984 Under Secretary to Government (Admn-1)
Law, Justice and Human Rights Department.

**NOTIFICATION**
**No.LAW 305 LCE 2005, Bangalore, Dated: 31st May 2006**

In exercise of powers conferred under section 165 of the Motor Vehicles Act (1988), the Government of Karnataka, on the recommendations of High Court of Karnataka hereby designate following Fast Track Courts functioning in the State also as Motor Accident Claims Tribunals:-

| | | |
|---|---|---|
| 1 | FTC-III | Bangalore City |
| 2 | FTC-IV | Bangalore City |
| 3 | FTC-V | Bangalore City |
| 4 | FTC-VI | Bangalore City |
| 5 | FTC-VII | Bangalore City |
| 6 | FTC-VIII | Bangalore City |
| 7 | FTC-IX | Bangalore City |
| 8 | FTC-X | Bangalore City |
| 9 | FTC-II | Bangalore Rural |
| 10 | FTC-III | Bangalore Rural |
| 11 | FTC-IV | Bangalore Rural |
| 12 | FTC-V | Bangalore Rural |
| 13 | FTC | Ramanagaram (Bangalore rural district). |
| 14 | FTC-I | Belgaum |
| 15 | FTC-II | Belgaum |
| 16 | FTC-III | Belgaum |
| 17 | FTC-IV | Belhaum |
| 18 | FTC | Chikkodi(Belgaum district) |
| 19 | FTC | Gokak(Belgaum district) |
| 20 | FTC-I | Raichur |
| 21 | FTC-II | Raichur |
| 22 | FTC-III | Raichur |
| 23 | FTC | Chitradurga |
| 24 | FTC | Hospet(Bellary district) |
| 25 | FTC-I | Davanagere |
| 26 | FTC-II | Davanagere |
| 27 | FTC-I | Dharwad |
| 28 | FTC-II | Dharwad |
| 29 | FTC-II | Gulbarga |
| 30 | FTC-III | Gulbarga |
| 31 | FTC-IV | Gulbarga |
| 32 | FTC-V | Gulbarga |
| 33 | FTC-VI | Gulbarga |
| 34 | FTC | Yadgir (Gulbarga district) |
| 35 | FTC | Virajpet (Kodagu district) |
| 36 | FTC-I | Bijapur |
| 37 | FTC-II | Bijapur |
| 38 | FTC-II | Bidar |
| 39 | FTC-III | Bidar |
| 40 | FTC-IV | Bidar |
| 41 | FTC | Balki (Bidar district) |
| 42 | FTC-I | Mysore |
| 43 | FTC-II | Mysore |
| 44 | FTC-III | Mysore |
| 45 | FTC-IV | Mysore |
| 46 | FTC-V | Mysore |
| 47 | FTC | Chamarajnagar |
| 48 | FTC | Kollegal (Chamarajnagar district) |
| 49 | FTC-I | Shimoga |
| 50 | FTC-II | Shimoga |
| 51 | FTC-III | Shimoga |
| 52 | FTC-II | Kolar |
| 53 | FTC-III | Kolar |
| 54 | FTC-IV | Kolar |
| 55 | FTC | Chikkaballapur (Kolar district) |
| 56 | FTC | Karwar |
| 57 | FTC-II | Karwar |
| 58 | FTC-I | Tumkur |
| 59 | FTC-II | Tumkur |
| 60 | FTC-III | Tumkur |
| 61 | FTC-IV | Tumkur |
| 62 | FTC-V | Tumkur |
| 63 | FTC-I | Hassan |
| 64 | FTC-II | Hassan |
| 65 | FTC-III | Hassan |
| 66 | FTC-I | Mandya |
| 67 | FTC-II | Mandya |
| 68 | FTC-III | Mandya |
| 69 | FTC IV | Mandya |
| 70 | FTC | D.K.Mangalore |
| 71 | FTC | Bhagalakot |
| 72 | FTC II | Bhagalakot |
| 73 | FTC | Jamakhandi(Bhagalkot district) |
| 74 | FTC | Chikkamagalore |
| 75 | FTC II | Chikkamagalore |
| 76 | FTC | Kadur (Chikkamagalore District) |
| 77 | FTC | Tarikere(Chikkamagalore district) |
| 78 | FTC I | Koppal |
| 79 | FTC II | Koppal |
| 80 | FTC | Udupi |
| 81 | FTC | Haveri |

By Order and in the Name of the Governor of Karnataka,

**GANGANARASAIAH**

Under Secretary to Government (Admn.1),

Law, Justice & Human Rights Department.

PR-1024

**COMMERCE & INDUSTRIES SECRETARIAT**
**NOTIFICATION**
**No. CI 222 MMM 2005, Bangalore, Dated: 16th May 2006**

In pursuance of sub-section (2) of Section 8 of the Mines and Minerals (Development and Regulation) Act, 1957, the Government of Karnataka hereby accords sanction for First renewal of Mining Lease No.111 for a period of 20 years (Twenty years only) w.e.f. 30.10.1992 in favour of M/s Hind Traders for Iron ore over an area of 19.63 hectares (Nineteen point six three hectares only) in Vittalapuram village of Sandur taluk, Bellary district with boundaries as mentioned below and as per the sketch furnished by the Director of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as amended from time to time and other applicable acts and Rules including Forest (Conservation) Act, 1980 and rules made there under.

**BOUNDARIES**

| | | | |
|---|---|---|---|
| On the North by | Part of V.L. of Tumti | On the South by | Sy.No.1 of Vittalapura (P.L.area) |
| On the East by | Part of V.L. of Mallappanagudi | On the West by | M.L. area of M/s. Mehaboob Transport and Sy.No.1 of Tumti village. |

The renewal of this Mining Lease is subject to the conditions that the leaseholder obtains Forest clearance under Section 2 of F.C. Act, 1980 and also subject to the terms and conditions appended hereto.

By Order and in the Name of the Governor of Karnataka,
**JAGADISH JOIS**
Under Secretary to Government (Mines)
Commerce & Industries Department.

**TERMS AND CONDITIONS OF THE FIRST RENEWAL OF MINING LEASE NO.111 SANCTIONED IN GOVERNMENT NOTIFICATION NO. CI 222 MMM 2005, Dated: 16.05.2006**

a) Mining lease should be in respect of **Iron Ore** only. If other minerals are found in association with **Iron Ore,** they should be brought to the notice of Government and if the lessee desires to mine these minerals along with **Iron Ore,** he/she/it should do so only after the consent of Government is obtained in writing.
b) If berul or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.
c) The lease shall also be subject to the provisions of Rules in Chapter IV of the Minerals Concession Rules, 1960.
d) The lease shall also be subject to the Rules, issued U/s 18 of the Mines & Minerals (D&R) Act, 1957.
e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.
f) The lessee shall be governed by all conditions that may be incorporated in the lease deed, to be executed.
g) The lessee shall abide by the rules contained in the Karnataka State Forest Manual, if the lease area covers any forestland.
h) Government shall have the right of purchasing the ore at current market rates.
i) The lease would be determined if the lessee fails to commence execution of the lease deed.
j) The area mentioned above is subject to verification after actual survey and demarcation.
k) The lease shall be for a period of **Twenty Years w.e.f 30.10.1992.**
l) The lessee/s shall pay dead rent, casses and royalty as detailed below:-

**DEAD RENT PAYABLE PER HECTARE PER ANNUM**

| | | |
|---|---|---|
| Ist year of the lease | : | Nil |
| 2nd year to 5th year of the lease | : | Not applicable. |
| 6th year to 10th year of the lease | : | Not applicable. |
| 11th year of the lease & onwards | : | Rs.400/- |

**Surface Rent:** Rs.2.50 per hectare per annum on the area used by the lessee/s for mining purposes.

**Local & other Cesses:** As prevalent in Bellary District.

**Royalty:** At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**JAGADISH JOIS**
Under Secretary to Government (Mines)
Commerce & Industries Department.

PR-990

**NOTIFICATION**

**No. CI.102:MMM.2006, Bangalore, Dated: 27th May 2006**

In pursuance of sub-section (3) of Section 8 of the Mines and Minerals (Development and Regulation) Act, 1957, the Government of Karnataka hereby accords sanction for Second renewal of Mining Lease No.2021 for a period of 20 years(Twenty years only) w.e.f. 23.06.2006 in favour of M/s.R.B.Seth Shreeram Narasing Das for Iron ore over an area of 76.09 hectares in Sankalapura village, Hospet Taluk, Bellary district with boundaries as mentioned below and as per the sketch furnished by the Director of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as amended from time to time and other applicable Acts and Rules including Forest (Conservation) Act, 1980 and rules made there under.

**BOUNDARIES**

| | | | |
|---|---|---|---|
| On the North by | Part of Sy.No.51 & 52 | On the South by | Part of Sy.No.51 & 53 |
| On the East by | Part of Sy.No.72 Kariganur | On the West by | Part of Sy.No.96 Jambunathanahalli |

The renewal of this Mining Lease is also subject to the terms and conditions appended hereto.

By Order and in the Name of the Governor of Karnataka,

**JAGADISH JOIS**
Under Secretary to Government (Mines)
Commerce & Industries Department.

**TERMS AND CONDITIONS OF THE SECOND RENEWAL OF MINING LEASE NO.2021 SANCTIONED IN GOVERNMENT NOTIFICATION NO. CI.102:MMM.2006 Dated 27.05.2006.**

a) Mining lease should be in respect of Iron Ore only. If other minerals are found in association with Iron Ore, they should be brought to the notice of Government and if the lessee desires to mine these minerals along with Iron Ore, he/she/it should do so only after the consent of Government is obtained in writing.

b) If berul or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D&R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forestland.
h) Government shall have the right of purchasing the ore at current market rates.
i) The lease would be determined if the lessee fails to commence execution of the lease deed.
j) The area mentioned above is subject to verification after actual survey and demarcation.
k) The lease shall be for a period of TwentyYears w.e.f. 23.06.2006.
l) The lessee/s shall pay dead rent, cesses and royalty as detailed below:-

**DEAD RENT PAYABLE PER HECTARE PER ANNUM**

| | |
|---|---|
| Ist year of the lease | : Nil |
| 2nd year to 5th year of the lease | : Not applicable |
| 6th year to 10th year of the lease | : Not applicable |
| 11th year of the lease & onwards | : Rs.400/- |

**Surface Rent:** Rs.2.50 per hectare per annum on the area used by the lessee/s for mining purposes.

**Local & other Cesses:** As prevalent in Bellary district.

**Royalty:** At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.
n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**JAGADISH JOIS**
Under Secretary to Government (Mines)
PR-1025 Commerce & Industries Department.

**NOTIFICATION**

**NO.CI 143 SGF 05, Bangalore, Dated: 6th June 2006**

Whereas it is necessary to make an order with a view to enabling M/s. Chincholi Sugar Mills (L), Chincholi, Gulbarga District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely: -

**I. TITLE, COMMENCEMENT AND DURATION OF OPERATION:**

i. This Order may be called the Karnataka Sugarcane (Regulation of Distribution) M/s. Chincholi Sugar Mills (L), Gulbarga District order 2006.
ii. It shall come into force at once and shall remain in force till withdrawn or repealed subject to amendments as the State Government may make from time to time.

**2. DEFINITIONS: - In this order: -**

a. Factory means the premises of the factory at Chincholi, Gulbarga District. Owned by Chincholi Sugar Mills (L), Chincholi including the precincts of such factory.
b. 'Form' means a form appended to this order.
c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

3. Determination of the quantity of Sugarcane required by the factory and reservation of the area for supply of sugarcane.

i. The crushing capacity of M/s. Chincholi Sugar Mills (L), being 2500 TCD. The quantity of Sugarcane required by the factory during a year is about 4.5 Lakh M.Ts to 5.00 Lakh M.Ts.
ii. The factory shall secure the sugarcane determined under subclause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories likely to come up in that area are established in which case the Villages shall be reallocate.

**4. FIXIATION OF QUANTITY OF SUGARCANE TO BE SUPPLIED BY THE GROWER: -**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative Society operating in the reserved area, through such society.

**5. AGREEMENT TO SUPPLY OR PURCHASE THE DETERMINED QUANTITY OF SUGARCANE.**

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. PROHIBITION OF EXPORT OF SUGARCANE FROM AREA RESERVED TEMPORARILY.**

No. Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS:**

i. Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the Name of the Governor of Karnataka,

**P. ANANDAKUMAR**

Desk Officer (Sugar),

Commerce & Industries Department.

**SCHEDULE –I**

**List of Villages allotted to M/s.Chincholi Sugar Mills (L), Chincholi, Gulbarga District, temporarily for supply of Sugar Cane**

| Sl.No. | Name of the Taluk & District | No.of Villages |
|---|---|---|
| 1 | Chincholi, Taluk, Gulbarga District | All 143 Villages |
| 2 | Chitapur Taluk, Gulbarga District | All 122 Villages |
| 3 | Sedam Taluk, Gulbarga District | All 112 Villages |
| **Total** | | **377 Villages** |

**P. ANANDAKUMAR**

Desk Officer (Sugar), Commerce & Industries Department.

**SCHEDULE –II - FORM -I**

**(SEE CLAUSE 6)**

**The Karnataka Sugarcane (Regulation of Distribution), M/s. Chincholi Sugar Mills (L) Chincholi, Gulbarga District Order 2006.**

**Permit No.** **Date:**

1. Full name of the permit holder :
2. Father's Name :
3. Residential Address in full :
4. Quantity of Sugarcane for which permit is granted for export :
5. Area and village from which Sugarcane is permitted to be Exported. :
6. A. Place to which it is to be exported
   B. The purpose for which export is permitted.
   i. For Sale
   ii. For crushing sugar cane juice for Manufacture of Gur/Sakkare Gul/ Jaggery Rabi or Khandasari.
7. Their permit is valid upto :
8. The permit is granted subject to the following terms and conditions. :
   a. Permit is not transferable.
   b. The permit shall be produced on demand by an officer authorized by the Deputy Commissioner.

c. On expiry of the validity of the permission within 48 hours of the expiry of the validity date the permit shall be surrendered to the permit issuing authority.

Place
Date

SIGNATURE OF THE PERMIT ISSUING AUTHORITY.

**SCHEDULE –II - FORM -II**
**(SEE CLAUSE 7)**

**The Karnataka Sugarcane (Regulation of Distribution), M/s. Chincholi Sugar Mills (L), Chincholi, Gulbarga District Order 2006.**

Application for the grant of permit for exporting sugarcane from a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which permit is requested for export :
5. Area and the village from which Sugarcane is intended to be exported
6. The purpose for which the export is intended
   i) For Sale :
   ii) For Crushing Sugarcane Juice or manufacture of Gur/Sakkare Gul/Jaggery/Rabi/or Khandasari for sale or self consumption :

I declare that, I am fully aware of the provisions of the Karnataka Sugarcane (Regulation of Distribution), M/s.Chincholi Sugar Mills (L), Chincholi, Gulbarga District order 2006 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.I of the Schedule appended to the Karnataka Sugarcane (Regulation of Distribution), M/s.Chincholi Sugar Mills (L), Chincholi, Gulbarga District Order 2006. and I agree to abide by them.

Place:
Date:

SIGNATURE OF THE APPLICANT.

P.R. 1026

**ಆರ್ಥಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಇ 44 ಟಿಎಆರ್ 2006, ಬೆಂಗಳೂರು, ದಿನಾಂಕ: 17ನೇ ಮೇ 2006**

ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ, 2004ರ (2005ರ ಕರ್ನಾಟಕ ಅಧಿನಿಯಮ 30) 1ನೇ ಪ್ರಕರಣದ (2)ನೇ ಉಪ–ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಸದರಿ ಅಧಿನಿಯಮದ ಎಲ್ಲಾ ಉಪಬಂಧಗಳು ದಿನಾಂಕ: 17ನೇ ಮೇ 2006 ರಂದು ಜಾರಿಗೆ ಬರತಕ್ಕದ್ದೆಂದು ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶಾಮರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಎಫ್‌ಆರ್ ಮತ್ತು ಬಿಸಿಸಿ).

**FINANCE SECRETARIAT**

**NOTIFICATION No. FD 44 TAR 2006, Bangalore, Dated: 17th May 2006**

In exercise of the powers conferred by sub-section (2) of Section 1 of the Karnataka Protection of Interest of Depositors in Financial Establishments Act, 2004 (Karnataka Act 30 of 2005), the Government of Karnataka hereby appoints the 17th day of May, 2006 as the date on which all provisions of the said Act shall come in to force.

By Order and in the Name of the Governor of Karnataka,
**C. SHAMARAO**
Under Secretary to Government (FR & BCC),
Finance Department.

P.R. 1013